# ನಮ್ಮ ಮಾನಸ

ಮಾರ್ಚ್ 2008

ಸಂಪುಟ : 1  ಸಂಚಿಕೆ : 11



*Editor, Printer and Publisher*
***Rajeshwari H.S.,***
*No. 114/5, 9th Cross, 2nd Main*
*Chamarajpet, Bangalore - 560 018.*
*Mobile : 9449345698*



*Printed at*
***ILA Mudrana***
*No. 36, 40 Ft. Road,*
*Raghavanagara*
*New Timberyard Layout*
*Bangalore - 560 026.*
*✆ : 26757159*



ಸಂಪಾದಕ ಮಂಡಳಿ
ಚಂಪಾವತಿ ಹೆಚ್.ಎಸ್.
ಸವಿತಾ ಎ., ವೆಂ. ವನಜಾ
ಗೀತಾ, ಎಚ್.ಎಸ್. ಪುಷ್ಪಾ.

●

ಸಲಹೆ – ಸಹಕಾರ
ಇಳಾ ವಿಜಯಾ
ಸುಮಿತ್ರಾಬಾಯಿ ಬಿ.ಎನ್.

●

ಮಾನಸ ಬಳಗ
ತಸ್ಲೀಂ ತಾಜ್, ವೇದವಲ್ಲಿ ಜಿ.ವಿ.
ವತ್ಸಲ ವೈ.ಎನ್.,
ಶ್ಯಾಮಲ, ತಾಜುಮಾ

●

ಮುಖಪುಟ ಚಿತ್ರ
ಪ್ರಕಾಶ್ ಕುಂದಕೊರ, ಕೊಪ್ಪಳ


●

ಚಂದಾ ವಿವರ

| | |
|---|---|
| ಬಿಡಿಪ್ರತಿ | 8–00 ರೂ. |
| ವಾರ್ಷಿಕ ಚಂದಾ (ವಿಶೇಷ ಸಂಚಿಕೆಯೊಂದಿಗೆ) | 100–00 ರೂ. |
| ಸಂಸ್ಥೆಗಳಿಗೆ | 150–00 ರೂ. |

## ಪರಿವಿಡಿ






## ನಮ್ಮ ಮಾನಸ

114/5, 9ನೇ ತಿರುವು, 2ನೇ ಮುಖ್ಯರಸ್ತೆ, ಚಾಮರಾಜಪೇಟೆ
ಬೆಂಗಳೂರು – 560 018


ಚಂದಾಹಣವನ್ನು ಈ ವಿಳಾಸಕ್ಕೆ ಚೆಕ್ ಅಥವಾ
ಡಿ.ಡಿ. ಮೂಲಕ ಕಳಿಸಬಹುದು

– – –

ಮೈಸೂರಿನಲ್ಲಿ ಓದುಗರು ಪ್ರತಿಗಳಿಗೆ ಹಾಗೂ
ಚಂದಾ ನವೀಕರಣಕ್ಕೆ ಸಂಪರ್ಕಿಸಿ


**ವೆಂ. ವನಜ**

*2329, 12ನೇ ಮೈನ್, 2ನೇ ಹಂತ, ವಿಜಯನಗರ*
*ಮೈಸೂರು – 570 017*



ಸಂಪಾದಕೀಯ

# ಯುದ್ಧ-ಅವಳು-ಹಿಂಸೆ; ಎಲ್ಲ ಅವರ ಹೆಮ್ಮೆ!

ಜಗತ್ತಿನ ಇತಿಹಾಸದ ಕಡೆಗೆ ಕಣ್ಣು ಹಾಯಿಸಿದಾಗ, ಅದು ಸಂಪೂರ್ಣವಾಗಿ ಯುದ್ಧ ಹಾಗೂ ಹಿಂಸೆಯಿಂದ ತುಂಬಿರುವುದು ಕಂಡುಬರುತ್ತದೆ. ಯುದ್ಧ ಹಾಗೂ ಹಿಂಸೆ ಇತಿಹಾಸದ ಒಂದು ಅವಿಭಾಜ್ಯ ಅಂಗವೆನ್ನುವಷ್ಟು ಸಹಜವಾಗಿ ಚಿತ್ರಿತವಾಗುತ್ತಿದೆ. ಜಗತ್ತು ಎದುರಿಸಿದ ಎರಡು ಮಹಾಯುದ್ಧಗಳ ಪರಿಣಾಮ ಸಣ್ಣ ಪ್ರಮಾಣದ್ದಲ್ಲ. ಎರಡನೇ ಮಹಾಯುದ್ಧದಲ್ಲಿ ಜಪಾನ್ ದೇಶದ ಮೇಲೆ ಹಾಕಲಾದ ಅಣುಬಾಂಬುಗಳ ಭೀಕರ ಪರಿಣಾಮವನ್ನು ಇನ್ನೂ ಗರ್ಭದಲ್ಲಿರುವ ಶಿಸುಗಳೂ ಮಾತನಾಡುತ್ತಲೇ ಇವೆ.

ಜನಾಂಗೀಯ ಪರಿಶುದ್ಧತೆಗಾಗಿ ನಾಜಿಗಳು ನಡೆಸಿದ ಹಿಂಸೆ, ಯಹೂದಿಗಳ ಮಾರಣಹೋಮದ ವಾಸನೆಯನ್ನು ಚರಿತ್ರೆಗಳ ಪುಟಗಳಿಂದಾಚೆಯ ಮಾನವೀಯತೆಯ ಮನಸ್ಸುಗಳು ಗ್ರಹಿಸುತ್ತವೆ. ವಸಾಹತುಶಾಹಿ ನೀತಿ ಹಲವಾರು ಯುದ್ಧಗಳಿಗೆ ಪ್ರೇರಣೆ ನೀಡಿದೆ. ಇರಾಕಿನ ಮೇಲೆ ಅಮೇರಿಕಾ ನಡೆಸುತ್ತಿರುವ ಶತಮಾನಗಳ ಯುದ್ಧ ನಮ್ಮ ಮುಂದಿದೆ. ೧೯೬೦ರಿಂದಲೂ ಕ್ಯೂಬಾದ ಮೇಲಿನ ದಾಳಿಯ ಕ್ರೌರ್ಯವನ್ನು ಜಗತ್ತು ವೀಕ್ಷಿಸುತ್ತಲೇ ಬಂದಿದೆ. ಕೆನಡಾದ ಮೂಲ ನಿವಾಸಿಗಳಿಗೆ ಸಿಡುಬು ರೋಗದ ಸೋಂಕಿರುವ ಕಂಬಳಿಗಳನ್ನು ನೀಡುವುದರ ಮೂಲಕ ಜನರನ್ನು ಸಂಪೂರ್ಣ ನಾಶ ಮಾಡಲಾಯಿತು. ನಿಕರಾಗುವಾದ ಮೇಲೆ ನಡೆದ ಕಾರ್ಯಾಚರಣೆ, ಪ್ಯಾಲೆಸ್ತೈನ್ ಮೇಲೆ ಇಸ್ರೇಲ್ ನಡೆಸಿದ ನರಮೇಧ ಹೀಗೆ ಉದಾಹರಣೆಗಳು ಮುಂದುವರಿಯುತ್ತಲೇ ಹೋಗುತ್ತವೆ.

ಯುದ್ಧವು, ಜನಜೀವನದ ಮೇಲೆ ಬೀರುವ ಪರಿಣಾಮವನ್ನು ಆರ್ಥಿಕ, ಸಾಮಾಜಿಕ, ರಾಜಕೀಯ ನೆಲೆಯಲ್ಲಿ ವಿಶ್ಲೇಷಿಸಲಾಗುತ್ತಿದೆ. ಯುದ್ಧದ ಸಂದರ್ಭದಲ್ಲಿ ಮಾನವ ಹಕ್ಕುಗಳ ಉಲ್ಲಂಘನೆಯ ಬಗ್ಗೆಯು ಅಂತರರಾಷ್ಟ್ರೀಯ ಮಟ್ಟದಲ್ಲಿ ಚರ್ಚೆ ನಡೆಸಿ, ಜಗತ್ತಿನ ಗಮನ ಸೆಳೆಯಲಾಗಿದೆ. ಆದರೆ ಯುದ್ಧದ ಸಂದರ್ಭಗಳಲ್ಲಿ ಮಹಿಳೆಯರ ಮೇಲೆ ನಡೆಯುವ ಪೈಶಾಚಿಕ ಹಿಂಸೆಯ ಬಗ್ಗೆ ಮಾತನಾಡಿದವರು, ದನಿ ಎತ್ತಿದವರು ತುಂಬಾ ಕಡಿಮೆ. ಎರಡನೇ ಮಹಾಯುದ್ಧದ ಸಂದರ್ಭದಲ್ಲಿ ಏಷಿಯಾದ ಹಲವು ದೇಶಗಳಿಗೆ ಸೇರಿದ ಮಹಿಳೆಯರ ಮೇಲೆ ಸೈನಿಕರು ನಡೆಸಿದ ಅಮಾನುಷ ಹಿಂಸೆ, ಅದಕ್ಕೆ ಬಲಿಯಾದ ಮಹಿಳೆಯರ ಕ್ಷೀಣ ಧ್ವನಿ ಸಂಸ್ಕೃತಿಯ ಇತಿಹಾಸದಲ್ಲಿ ಹುದುಗಿಹೋಗಿತ್ತು; ೫೦ ವರ್ಷಗಳವರೆಗೆ ಈ ಕ್ರೌರ್ಯವನ್ನು ವ್ಯವಸ್ಥಿತವಾಗಿ ಮುಚ್ಚಿಡಲಾಗಿತ್ತು.

ಪ್ಯಾಲೆಸ್ತೈನ್ ಮಹಿಳೆಯರ ಮೇಲೆ ಇಸ್ರೇಲ್ ನಡೆಸುತ್ತಿರುವ ಹಿಂಸೆಯನ್ನೇ ನೋಡಿ, ತಮ್ಮದೇ ಆದ ನೆಲೆಯಿಂದ ಉಚ್ಚಾಟಿತರಾದ ಮಹಿಳೆಯರು ತಮ್ಮ ಭೂಮಿ, ಮನೆ, ಹೊಲ, ತೋಟಗಳನ್ನು ಪಡೆದುಕೊಳ್ಳಲು ನಡೆಸುತ್ತಿರುವ ಮಾನವೀಯ ಹೋರಾಟಕ್ಕೆ ತೆರಬೇಕಾದ ಬೆಲೆ ಅಪಾರವಾದುದು.

೧೯೯೨-೯೫ರ ಅವಧಿಯಲ್ಲಿ ಬೋಸ್ನಿಯಾ ಯುದ್ಧ ಶಿಬಿರಗಳಲ್ಲಿ ೮ ವರ್ಷದ ಮಗುವಿನಿಂದ ಹಿಡಿದು ೭೦ ವರ್ಷದ ಮಹಿಳೆಯರೂ ಅತ್ಯಾಚಾರಕ್ಕೆ ಒಳಗಾಗಿದ್ದಾರೆ. ಯುದ್ಧ ಕಾಲದಲ್ಲಿ ಅತ್ಯಾಚಾರ, ಅಪಮಾನಕ್ಕೆ ಒಳಗಾಗ ಹತ್ತು ಜನ ಮಹಿಳೆಯರು ಸಂಘಟಿತರಾಗಿ ನ್ಯಾಯಾಲಯದ ಮೆಟ್ಟಿಲೇರಿದ್ದರು. ಹೇಗ್ ನ್ಯಾಯಾಲಯ ಈ ಮಹಿಳೆಯರು ನ್ಯಾಯಾಲಯದಲ್ಲಿ ನೀಡಿದ ಸಾಕ್ಷಿಯನ್ನು ಕಂಡು ಬೆಚ್ಚಿ ಬಿದ್ದಿತ್ತು ಮತ್ತು ಹಿಂದಿನ ಯುಗೋಸ್ಲೋವಿಯಾದ ರಾಜಕಾರಣಿಗೆ ೩೫ ಮಿಲಿಯನ್ ಡಾಲರ್ ಪರಿಹಾರ ನೀಡಬೇಕೆಂದು ಆದೇಶಿಸಿತ್ತು.

ಯುದ್ಧ ಶಿಬಿರಗಳಲ್ಲಿ ಅಪ್ರಾಪ್ತ ವಯಸ್ಸಿನ ಬಾಲಕಿಯರ ಮೇಲೆ ಅತ್ಯಾಚಾರವೆಸಗಲಾಗುತ್ತಿತ್ತು. ತಮ್ಮ ಮಕ್ಕಳ ಮೇಲೆ ನಡೆಯುವ ಅಮಾನುಷ ಅತ್ಯಾಚಾರ ಹಾಗೂ ಚಿತ್ರಹಿಂಸೆಯನ್ನು ತಾಯಂದಿರು ವೀಕ್ಷಿಸುವಂತೆ ಒತ್ತಾಯಿಸಲಾಗುತ್ತಿತ್ತು. ಅನೇಕ ಮಹಿಳೆಯರು ಕೊಲೆಯಾಗುತ್ತಿದ್ದರು, ಇಲ್ಲವೇ ಕಾಣೆಯಾಗುತ್ತಿದ್ದರು. ಬಿಡುಗಡೆಯಾದ ಮಹಿಳೆಯರು ಹಾಗೂ ಬಾಲಕಿಯರು ಅಪಮಾನ ಹಾಗೂ ಅಗೌರವಗಳಿಂದ ನರಳಿ ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದರು. ಮಹಿಳೆಯರ ಮೇಲೆ ನಡೆಯುವ ಇಂತಹ ಹಿಂಸೆ ಕೇವಲ ಯುದ್ಧ ಕಾಲದಲ್ಲೇ ನಡೆಯಬೇಕೆಂದಿಲ್ಲ, ಶಾಂತಿ ಕಾಪಾಡುವ ಉದ್ದೇಶದಿಂದ ಗಡಿ ಪ್ರದೇಶಗಳಲ್ಲಿ ಬೀಡು ಬಿಟ್ಟಿರುವ ಸೈನಿಕರಿಂದಲೂ ಸಹ ನಡೆಯುತ್ತದೆ.

ಅಮೆರಿಕಾದ ಫಿಲಿಪಿನೋ ಮಿಲಿಟರಿ ನೆಲೆಯಿಂದ ಸೈನಿಕರನ್ನು ವಾಪಸ್ ಕರೆಸಿಕೊಂಡ ನಂತರ, ಅಲ್ಲಿನ ಮಹಿಳೆಯರು ಅಮೆರಿಕಾದ ಪುರುಷರಿಂದ ಹುಟ್ಟಿದ ಮಕ್ಕಳೊಂದಿಗೆ ಬದುಕಿಗೆ ಆಧಾರವಿಲ್ಲದೆ ಅತಂತ್ರರಾಗಿದ್ದಾರೆ. ಮೊಸಾಂಬಿಕ್ ದೇಶದಲ್ಲಿದ್ದ

ವಿಶ್ವಸಂಸ್ಥೆಯ ಶಾಂತಿ ಪಾಲನಾ ಪಡೆಗಳ ಇಟಾಲಿಯನ್ ತುಕಡಿ ಸ್ಥಳೀಯ ಮಟ್ಟದಲ್ಲಿ ವೇಶ್ಯಾ ಸಮಸ್ಯೆಯನ್ನು ವ್ಯವಸ್ಥಿತವಾಗಿ ಹುಟ್ಟುಹಾಕಿತು. ಮಿಲಿಟರಿ ಪಡೆಗಳು ಮಹಿಳೆಯರನ್ನು ತಮ್ಮ ಕಾಮದಾಹಕ್ಕೆ ಬಳಸಿಕೊಳ್ಳುವುದು ಶತಮಾನಗಳಿಂದ ನಡೆಯುತ್ತಲೇ ಬಂದಿದೆ.

ಯುದ್ಧದ ಸಂದರ್ಭದಲ್ಲಿ ಮಹಿಳೆಯರ ಮೇಲೆ ನಡೆಯುವ ಅಮಾನುಷ ಕ್ರೌರ್ಯ ಹಾಗೂ ಹಿಂಸೆಯ ಬೇರು ಪುರುಷ ಪ್ರಧಾನ ಸಂಸ್ಕೃತಿಯಲ್ಲಡಗಿವೆ. ಮಿಲಿಟರಿ ಸಂಸ್ಕೃತಿ ಹಾಗೂ ಪುರುಷ ಪ್ರಧಾನ ಮೌಲ್ಯಗಳು ಜೊತೆಜೊತೆಯಾಗಿ ಬೆಸೆದುಕೊಳ್ಳುವುದರಿಂದ ಮಾತ್ರ ಇಂತಹ ವಿಕೃತ ಹಿಂಸೆಯ ಸ್ವರೂಪವನ್ನು ಕಾಣಬಹುದು. ಶತ್ರು ಬಣದ ಸೈನಿಕರನ್ನು ಬಗ್ಗು ಬಡಿಯಲು ಅವರ ಮಹಿಳೆಯರ ಮೇಲೆ ಅತ್ಯಾಚಾರವೆಸಗುವುದು ಮಿಲಿಟರಿ ತಂತ್ರವಾಗಿದೆ. ಬಲಾತ್ಕಾರದ ಲೈಂಗಿಕತೆಯು ಪುರುಷ ಪ್ರಧಾನ ಮಿಲಿಟರಿ ಸಂಸ್ಕೃತಿಯ ಒಂದು ಬಲಾಢ್ಯ ತಂತ್ರವಾಗಿದೆ. ಮಿಲಿಟರಿ ವೇಶ್ಯಾಗೃಹಗಳನ್ನು ಹುಟ್ಟುಹಾಕಿ ಅಪ್ರಾಪ್ತ ವಯಸ್ಸಿನ ಬಾಲಕಿಯರನ್ನು ಇದಕ್ಕಾಗಿ ಬಳಸಿಕೊಳ್ಳಲಾಗುತ್ತದೆ.

ಇಂದು ಜಾಗತಿಕ ಮಟ್ಟದಲ್ಲಿ ಶಸ್ತ್ರಾಸ್ತ್ರ ಸಂಗ್ರಹಣೆಯ ಪೈಪೋಟಿ ನಡೆಯುತ್ತಿದೆ. ಅಮೇರಿಕಾ, ಬ್ರಿಟನ್‌ನಂತಹ ದೇಶಗಳು ಜಗತ್ತಿನಲ್ಲಿ ಬಹುದೊಡ್ಡ ಮಟ್ಟದಲ್ಲಿ ಶಸ್ತ್ರಾಸ್ತ್ರ ಮಾರಾಟವನ್ನು ಮಾಡುತ್ತಿವೆ. ಇದೊಂದು ಲಾಭ ತರುವ ಬಹುದೊಡ್ಡ ವ್ಯಾಪಾರವಾಗಿದೆ. ಯುದ್ಧ ಸನ್ನಿವೇಶಗಳನ್ನು ಹುಟ್ಟುಹಾಕುತ್ತಾ, ಆಯಾ ರಾಷ್ಟ್ರಗಳ ಕೈಗೊಂಬೆ ದೇಶಗಳಲ್ಲಿ ಶಸ್ತ್ರಾಸ್ತ್ರ ಮಾರಾಟದ ಮಾರುಕಟ್ಟೆಯನ್ನು ಹುಟ್ಟುಹಾಕುವುದರ ಜೊತೆಗೆ ತಮ್ಮ ಮಿಲಿಟರಿ ನೆಲೆಗಳನ್ನು ಸ್ಥಾಪಿಸಿಕೊಳ್ಳುವುದು ಬಲಾಢ್ಯ ರಾಷ್ಟ್ರಗಳ ಮುಖ್ಯ ಉದ್ದೇಶವೂ ಆಗಿದೆ. ಪ್ರತಿಯೊಂದು ದೇಶವೂ ರಾಷ್ಟ್ರೀಯತೆ, ರಾಷ್ಟ್ರೀಯ ಭದ್ರತೆಯ ಹೆಸರಿನಲ್ಲಿ ಮಿಲಿಟರೀಕರಣಗೊಳ್ಳುತ್ತಿದೆ. ಶಸ್ತ್ರಾಸ್ತ್ರ ಸಂಗ್ರಹಣೆ, ಶಸ್ತ್ರಾಸ್ತ್ರಗಳ ಆಧುನೀಕರಣಕ್ಕೆ ಬಹಳಷ್ಟು ದೇಶಗಳು ಆದ್ಯತೆ ನೀಡುತ್ತಿವೆ. ರಾಷ್ಟ್ರೀಯ ಆದಾಯಕ್ಕೆ ಅನುಗುಣವಲ್ಲದ ರಕ್ಷಣಾ ವೆಚ್ಚಕ್ಕೆ ಹೆಚ್ಚು ಸಂಪನ್ಮೂಲವನ್ನು ಮೀಸಲಾಗಿಡುತ್ತವೆ.

ಜಗತ್ತಿನ ಮಹಿಳಾ ಚಳವಳಿ ಜಗತ್ತಿನ ಪುರುಷ ಪ್ರಧಾನ ಮಿಲಿಟರಿ ಸಂಸ್ಕೃತಿಯ ವಿರುದ್ಧ ತನ್ನ ಪ್ರತಿಭಟನೆಯ ಧ್ವನಿಯನ್ನು ಎತ್ತುತ್ತಿದೆ. ೫೦ ವರ್ಷಗಳ ನಂತರ ಲೈಂಗಿಕ ದಾಸಿಯರು ನಡೆಸಿದ ದಿಟ್ಟ ಹೋರಾಟ ಪುರುಷ ಪ್ರಧಾನ ಮಿಲಿಟರಿ ಸಂಸ್ಕೃತಿಯ ವಿಕೃತಿಯನ್ನು ಜಗತ್ತಿನ ಮುಂದಿಟ್ಟಿದೆ. ನಮ್ಮ ದೇಶದ ಈಶಾನ್ಯಗಡಿ ಪ್ರದೇಶಗಳಲ್ಲಿ ಹಾಗೂ ವಿಶೇಷವಾಗಿ ಮಣಿಪುರದ ಮಹಿಳೆಯರ ಮೇಲೆ ಸೈನಿಕರು ನಡೆಸಿದ ಲೈಂಗಿಕ ದೌರ್ಜನ್ಯದ ನಿದರ್ಶನ ನಮ್ಮ ಮುಂದಿದೆ. ಈ ದೌರ್ಜನ್ಯಕ್ಕೊಳಗಾದ ಮಹಿಳೆಯರು ಬೆತ್ತಲೆ ಪ್ರದರ್ಶನ ಮಾಡುವುದರ ಮೂಲಕ ತಮ್ಮ ಪ್ರತಿಭಟನೆಯನ್ನು ವ್ಯಕ್ತಪಡಿಸಿದರು.

ಈ ಎಲ್ಲ ವಿಕೃತಿಗಳಿಂದ ಭಾರತವೂ ಹೊರತಲ್ಲ. ಅಡಗಿರುವ ಅನೇಕ ಸತ್ಯಗಳನ್ನು ಬಗೆದು ತೆಗೆಯುವ ಕೆಲಸ ಆಗಬೇಕಾಗಿದೆ. ಎಲ್ಲೆಲ್ಲಿ ಮಿಲಿಟರಿ ವಸಾಹತುಗಳು ಯುದ್ಧ ಅಥವಾ ಶಾಂತಿಯ ನೆಪದಲ್ಲಿ ನೆಲೆಗೊಳ್ಳುತ್ತವೆಯೋ ಅಲ್ಲೆಲ್ಲ ಮಹಿಳೆ, ಮಕ್ಕಳು ಪೌರುಷ ಪ್ರದರ್ಶನದ ವಿಕೃತ ವಿಧಾನಕ್ಕೆ ಬಲಿಯಾಗಿದ್ದಾರೆ. ಇಲ್ಲಿ ಮಾನವೀಯತೆಯೆಂಬ ಶಬ್ದವೇ ಸುಳಿಯುವುದಿಲ್ಲ. ಇದೂ ಒಂದು ಬಹು ಗೌರವಾನ್ವಿತ, ಪ್ರತಿಷ್ಠಿತ, ಆಯಾ ದೇಶಗಳು ಹೆಮ್ಮೆ ಪಡುವ ವ್ಯವಸ್ಥೆ!

ಇತಿಹಾಸದಲ್ಲಿ ಹುದುಗಿ ಹೋದ ಇಂತಹ ಪ್ರತಿಭಟನೆಯ ಧ್ವನಿಗಳನ್ನು ಮಹಿಳೆಯರು ದಾಖಲಿಸುವುದರ ಜೊತೆಗೆ ಮಿಲಿಟರಿ ಸಂಸ್ಕೃತಿಯ ಬೇರುಗಳಿರುವುದು ಪುರುಷ ಪ್ರಧಾನ ಸಂಸ್ಕೃತಿಯಲ್ಲಿ ಎಂಬಂಶವನ್ನು ಜಗತ್ತಿಗೆ ಸಾರಿ ಹೇಳುವ ಪ್ರಯತ್ನವನ್ನು ಮಾಡುತ್ತಿದ್ದಾರೆ. ವೈಯಕ್ತಿಕವೆಂದು ಪರಿಗಣಿಸಲ್ಪಟ್ಟಿರುವ ಮಹಿಳೆಯರ ನೋವಿಗೆ ರಾಜಕೀಯ ಸ್ವರೂಪವೂ ಇದೆಯೆಂಬ ಅಂಶ ಮಹಿಳೆಯರ ಶೋಷಣೆಯ ವಿವಿಧ ಸ್ವರೂಪಕ್ಕೆ ಹಿಡಿದ ಕನ್ನಡಿಯಾಗಿದೆ. ಯುದ್ಧದ ಬಗ್ಗೆ ಮಹಿಳೆಯರ ಆಲೋಚನೆ ಭಿನ್ನವಾಗಿದೆ. ಹಿಂಸೆ, ದ್ವೇಷ, ಅವರ ಆಯ್ಕೆಗಳಲ್ಲ. ಶಾಂತಿಯ ಮೂಲಕ ಕಟ್ಟುವ ಸೃಜನಾತ್ಮಕ ಹಾದಿ ಅವರದು. ಅವರ ಬಿಡುಗಡೆಯ ಹೆಜ್ಜೆಗಳಲ್ಲಿ ಇತರ ಶೋಷಿತರ ಹಾದಿ ಇದೆಯೆಂಬುದು ಅವರ ಹೋರಾಟದ ಅಂತಃಸತ್ವ.

ಅಂತಾರಾಷ್ಟ್ರೀಯ ಮಹಿಳಾದಿನ(ಮಾರ್ಚ್ ೮)ದ ಹಿನ್ನೆಲೆಯಲ್ಲಿ ಇಂಥದೊಂದು ಅವಲೋಕನವು, ದಮನಕ್ಕೊಳಗಾದವರು ದನಿ ಎತ್ತಬೇಕು. ಗುಟ್ಟು ಮಾಡಿದಷ್ಟೂ ಶೋಷಕರನ್ನು ಕಾಪಾಡುತ್ತವೆ ಎಂಬ ಅರಿವಿನ ಹಾದಿಯಲ್ಲಿ ಸಾಗಲು ನೆರವಾಗುತ್ತದೆಂದು ಭಾವಿಸುತ್ತೇವೆ. 'ಕತ್ತಲ ಕಾಲದ ಹಾಡು' ಕೃತಿಯ ಭಾಗಗಳನ್ನು ಬಳಸಿಕೊಳ್ಳಲು ಅನುಮತಿಸಿದ ಪ್ರಕಾಶಕರಿಗೆಕೃತಜ್ಞತೆಗಳು. ಈ ಅಂತಾರಾಷ್ಟ್ರೀಯ ಮಹಿಳಾ ದಿನ ಸಂಗಾತಿಗಳಲ್ಲಿ ಇನ್ನಷ್ಟು ಚೈತನ್ಯ ತುಂಬಲಿ, ಮೆಟ್ಟಿ ನಿಂತು ಬದುಕು ನನ್ನದೇ ಎಂದು ಹೇಳುವಂತಾಗಲಿ ಎಂದು ಹಾರೈಸುತ್ತೇವೆ.

* * *

ರಾಜ್ಯ ಸರ್ಕಾರದ ಈ ಸಾಲಿನ 'ದಾನ ಚಿಂತಾಮಣಿ ಅತ್ತಿಮಬ್ಬೆ' ಪ್ರಶಸ್ತಿಯು ಸಂವೇದನಾಶೀಲ ಕವಯಿತ್ರಿ, ಹೋರಾಟಗಾತಿ ಶಶಿಕಲಾ ವೀರಯ್ಯಸ್ವಾಮಿ ಅವರಿಗೆ ಸಂದಿದೆ. ಆಕೆಯನ್ನು ಮಾನಸ ಬಳಗವು ಸಂತೋಷದಿಂದ ಅಭಿನಂದಿಸುತ್ತದೆ.

* * *

ಮೈಸೂರಿನ ಸ್ತ್ರೀವಾದಿ ಚಿಂತಕಿ, ಅಧ್ಯಯನ ಶೀಲೆ ವೆಂ. ವನಜ ಅವರು ಕಮಲಾಭಾಸಿನ್ ಅವರ 'ಅಂಡರ್ ಸ್ಟ್ಯಾಂಡಿಂಗ್ ಜಂಡರ್' ಕೃತಿಯ ಸಂಗ್ರಹಾನುವಾದ ಮಾಡಿ, ಪ್ರಕಟಿಸಲು ನೆರವಾಗಿದ್ದಾರೆ. ಸೂಕ್ಷ್ಮಾತಿಸೂಕ್ಷ್ಮ ನೆಲೆಯಲ್ಲಿ ನಡೆಯುವ ಲಿಂಗ ತಾರತಮ್ಯದ ಸ್ವರೂಪವನ್ನು ಗುರುತಿಸುತ್ತ ಹೊಸ ಎಚ್ಚರಕ್ಕೆ ದಾರಿ ಮಾಡಿದ್ದಾರೆ. ಅವರಿಗೆ ಮಾನಸ ಹಾಗೂ ಓದುಗ ಬಳಗದ ಕೃಜತ್ಞತೆಗಳು. ಮುಖಪುಟಕ್ಕೆ ಚಿತ್ರವನ್ನು ಬಳಸಲು ಅನುಮತಿಯಿತ್ತ ಜನವಾದಿ ಮಹಿಳಾ ಸಂಘಟನೆಯ ಕೆ.ಎಸ್. ವಿಮಲಾ ಅವರಿಗೆ ಕೃತಜ್ಞತೆಗಳು.

* * *

'ನಮ್ಮ ಮಾನಸ'ವನ್ನು ಮೆಚ್ಚಿ ಬರೆದವರು, ಸಲಹೆಗಳನ್ನು ನೀಡಿದವರು, ಹೊಸ ಓದುಗರನ್ನು ಪರಿಚಯಿಸಿದವರು, ಉಪಯುಕ್ತ ಲೇಖನಗಳು, ಕವಿತೆಗಳನ್ನು ಕಳುಹಿಸಿ ಬೆಂಬಲಿಸಿದವರು, ಜಾಹಿರಾತು ನೀಡಿ, ಧನಸಹಾಯ ಮಾಡಿ ಅಜ್ಞಾತವಾಗೇ ಇರಬಯಸಿದ ಓದುಗ ಬಂಧುಗಳು ಇವರಿಗೆಲ್ಲ ಮತ್ತೊಮ್ಮೆ ಕೃಜ್ಞತೆಗಳು. ಪ್ರೊ. ಎಂ.ಎಚ್. ಕೃಷ್ಣಯ್ಯನವರು ಕಲಾವಿದೆ-ಕಲೆ ಕುರಿತಂತೆ ವಿಶೇಷ ಲೇಖನಗಳನ್ನು ಸಿದ್ಧಪಡಿಸಿಕೊಡುವ ಕೃಪೆ ಮಾಡಿದ್ದಾರೆ. ಚಿತ್ರಗಳನ್ನು ವರ್ಣದಲ್ಲಿ ಮುದ್ರಿಸುವ ಆರ್ಥಿಕಾನುಕೂಲಗಳಿಲ್ಲವೆಂಬ ವ್ಯಥೆ ನಮಗೆ. ಓದುಗರು ಸಹಕರಿಸಬೇಕು.

❑

# ಮತ್ತೆ ಜೀವನದ ಚೆಲುವಿನ ಕಡೆಗೆ



*ನೆಲಿಯಾ ಸ್ಯಾಂಚೊ, ಫಿಲಿಪ್ಪೈನ್ಸ್*

ತಜ್ಞಸಾಕ್ಷಿ

*೨೦೦೧ರಲ್ಲಿ ದಕ್ಷಿಣ ಆಫ್ರಿಕಾದ ಕೇಪ್‌ಟೌನ್‌ನಲ್ಲಿ 'ಏಷಿಯಾ ಮಹಿಳಾ ಮಾನವ ಹಕ್ಕುಗಳ ಪರಿಷತ್' ಯುದ್ಧ ವಿರೋಧಿ ವಿಶ್ವ ಮಹಿಳಾ ನ್ಯಾಯಾಲಯವನ್ನು ಏರ್ಪಡಿಸಿತ್ತು. ಈ ಮುಕ್ತ ನ್ಯಾಯಾಲಯದಲ್ಲಿ ರುವಾಂಡೆ, ಪ್ಯಾಲೆಸ್ತೈನ್, ಬೋಸ್ನಿಯಾ ಮುಂತಾದ ದೇಶಗಳಿಂದ ಬಂದ ಮಹಿಳೆಯರು ಯುದ್ಧದ ಸಂದರ್ಭದಲ್ಲಿ ಹಿಂಸೆ, ದೌರ್ಜನ್ಯ, ಅತ್ಯಾಚಾರಕ್ಕೆ ಒಳಗಾದ ತಮ್ಮ ಅನುಭವಗಳನ್ನು ಸಾಕ್ಷಿ ರೂಪದಲ್ಲಿ ಹಂಚಿಕೊಂಡಿದ್ದರು. ಜನಾಂಗೀಯ ದ್ವೇಷ, ವಸಾಹತುಶಾಹಿ ಧೋರಣೆ, ಮಿಲಿಟರೀಕರಣ, ಪರಮಾಣು, ರಾಸಾಯನಿಕ ಜೈವಿಕ ಶಸ್ತ್ರಾಸ್ತ್ರಗಳ ವಿನಾಶಕಾರಿ ಪರಿಣಾಮ ಹಾಗೂ ಜಾಗತೀಕರಣ, ಅಭಿವೃದ್ಧಿ, ಮೂಲಭೂತವಾದ, ವರದಕ್ಷಿಣೆ, ಭ್ರೂಣಹತ್ಯೆ ಹೀಗೆ ಜಗತ್ತಿನ ರಾಜಕಾರಣದಿಂದ ಮೂಡಿಬಂದ ಹಿಂಸೆಯಿಂದ, ಕುಟುಂಬದಲ್ಲಿ ಮಹಿಳೆಯರ ಮೇಲೆ ನಡೆಯುವ ಖಾಸಗೀ ಎಂದು ಕರೆಯಲ್ಪಡುವ ಕೌಟುಂಬಿಕ ಹಿಂಸೆಯನ್ನು ಕುರಿತು, ನೊಂದ ಮಹಿಳೆಯರು ತಮ್ಮ ಸ್ವ ಅನುಭವಗಳನ್ನು ಹಂಚಿಕೊಂಡಿದ್ದರು. ಯುದ್ಧದ ಇತಿಹಾಸದ ಗೋರಿಯಲ್ಲಿ ಹುದುಗಿ ಹೋಗಿದ್ದ ಈ ಅನುಭವಗಳು ಪುರುಷ ರಾಜಕಾರಣದ ಹುನ್ನಾರಗಳನ್ನು ಹಾಗೂ ಯುದ್ಧ ನೀತಿಯ ಹಿಂದಿರುವ ಪುರುಷ ಪ್ರಧಾನ ಹಿಂಸೆಯ ಸ್ವರೂಪವನ್ನು ಎತ್ತಿ ತೋರಿಸುತ್ತವೆ. ಜಗತ್ತಿನ ಎಲ್ಲ ಮಹಿಳೆಯರ ಶೋಷಣೆಯ ಹಿಂದಿರುವ ಪುರುಷ ಪ್ರಧಾನ ಸಂಸ್ಕೃತಿಯ ಕ್ರೌರ್ಯದ ವಿವಿಧ ಮುಖಗಳನ್ನು ಅನಾವರಣಗೊಳಿಸುತ್ತವೆ. ಏಷಿಯನ್ ಮಹಿಳಾ ಮಾನವ ಹಕ್ಕುಗಳ ಪರಿಷತ್ ಪ್ರಕಟಿಸಿದ* **"ಕತ್ತಲ ಕಾಲದ ಹಾಡು"** *ಪುಸ್ತಕದ ಕೆಲವು ಆಯ್ದ ಭಾಗಗಳನ್ನು ಮಾನಸದ ಓದುಗರಿಗಾಗಿ ಇಲ್ಲಿ ಪ್ರಕಟಿಸಿದ್ದೇವೆ. ಮುಂದಿನ ಸಂಚಿಕೆಗಳಲ್ಲೂ ಕೆಲವು ಭಾಗಗಳನ್ನು ಪ್ರಕಟಿಸುತ್ತೇವೆ.*

*-ಸಂ*

**ಕ**ಳೆದ ಶತಮಾನ ೨ನೇ ಮಹಾಯುದ್ಧದ ಹಿಂಸೆ ಕಂಡಿತು. ಅದರ ದೌರ್ಜನ್ಯದ ಅಗಾಧತೆ ಆಧುನಿಕ ರಾಜ್ಯ-ಪ್ರಭುತ್ವಗಳು ಮತ್ತು ಜನತೆಯ ಸಾಮುದಾಯಿಕ ಮನಸಿನಲ್ಲಿ ಅಚ್ಚೊತ್ತಿದಂತೆ ಉಳಿದಿವೆ. ೨ನೇ ಮಹಾಯುದ್ಧ, ಶಸ್ತ್ರಸಜ್ಜಿತ ಯುದ್ಧವಷ್ಟೇ ಅಲ್ಲ; ಜನಾಂಗದ್ವೇಷ ಮತ್ತು ಸಾಮೂಹಿಕ ನರಮೇಧ ಯುದ್ಧಕ್ಕೆ ಸಂಬಂಧಿಸಿರದ ಹಸುಳೆಗಳನ್ನು ಒಳಗೊಂಡಂತೆ ಏಷಿಯಾದಲ್ಲಿ ಮಿಲಿಯಗಟ್ಟಲೆ ಜನರ ಕಗ್ಗೊಲೆ ಮಾಡಿತು. ವಸಾಹತುಶಾಹಿ ಕಟ್ಟಡಗಳು, ಪಾರಂಪರಿಕ ಸ್ಥಳಗಳು ಮತ್ತು ನಗರಗಳನ್ನು ಸುಟ್ಟುಹಾಕಲಾಯಿತು. ಅಣ್ವಸ್ತ್ರ ಪರೀಕ್ಷೆ ಮಾಡಲು ಅವುಗಳನ್ನ ಹಿರೋಷಿಮಾ ನಾಗಸಾಕಿ ಮೇಲೆ ಪ್ರಯೋಗಿಸಿ, ಆ ನಗರಗಳನ್ನ ಧ್ವಂಸ ಮಾಡಿದ್ದು ಈಗ ಇತಿಹಾಸ.

ಎರಡನೇ ಮಹಾಯುದ್ಧದ ಅನಂತರ ಜಗತ್ತು ಅನೇಕ ಯುದ್ಧಗಳನ್ನು ಕಂಡಿದೆ. ಪ್ಯಾಲೆಸ್ತೈನ್ ಮೇಲಿನ ಆಕ್ರಮಣ, ದೌರ್ಜನ್ಯ ಮತ್ತು ಕಗ್ಗೊಲೆಗಳನ್ನ ಕಂಡಿದ್ದೇವೆ. ವಿಯೆಟ್ನಾಂ ಮೇಲೆ ಯುದ್ಧಮಾಡಿದ ಅಮೆರಿಕ ಅಲ್ಲಿನ ಮೈಲ್ಯಾ ಗ್ರಾಮದ ಜನತೆಯ ಸಾಮೂಹಿಕ ನರಮೇಧಕ್ಕೆ ಪೂರಕ ಪರಿಸ್ಥಿತಿ ಸೃಷ್ಟಿಸಿತು. ಮಹಿಳೆಯರ ಮೇಲೆ ಅತ್ಯಾಚಾರ, ಪ್ರಕೃತಿನಾಶ, 'ಏಜೆಂಟ್ ಆರೆಂಜ್' ರಾಸಾಯನಿಕ ಬಳಸಿ ವಿಯೆಟ್ನಾಂ ದೇಶದ ಭೂಮಿ, ಅರಣ್ಯಗಳನ್ನು ಪಾಷಾಣಗೊಳಿಸಿದ್ದು, ಕೊಲೆಗಡುಕ ನೆಲೆ, ಲ್ಯಾಂಡ್‌ಮೈನ್‌ಗಳ ಬಳಕೆ, ಕಾಂಬೋಡಿಯಾದ ಜನತೆಯನ್ನು ಕಂಗೆಡಿಸಿದ್ದು ಅಂತಾರಾಷ್ಟ್ರೀಯ ಸಮುದಾಯಕ್ಕೆ ಗೊತ್ತಿರುವ ವಿಷಯ.

ಮಿಲಿಟರಿ ಸಂಸ್ಕೃತಿಯ ಬೇರುಗಳಿರುವುದು ಪೌರುಷ ಮೌಲ್ಯಗಳು ಮತ್ತು ಲಾಭಕೋರ ನೀತಿಗಳಲ್ಲಿ. ಯುದ್ಧ ಈಗ ಬಹುದೊಡ್ಡ ದಂಧೆ. ಈ ಎಲ್ಲಾ ಯುದ್ಧ ಮತ್ತು ಕದನಗಳಲ್ಲಿ ಮಿಲಿಟರಿ ಸಂಸ್ಕೃತಿ ಮತ್ತು ಸ್ತ್ರೀವಿರೋಧಿ ಹಿಂಸೆಗಳ ನಡುವಿನ ಸಂಬಂಧ ಎದ್ದು ಕಾಣುತ್ತಿದೆ. ಸಮಾಜದಲ್ಲಿ ಮಹಿಳೆಯ ಅಬಲತೆಯನ್ನ ಪ್ರಚೋದಿಸುವ ಹಿಂಸಾತ್ಮಕ ಸಾಧನವಾಗಿ ಅತ್ಯಾಚಾರ ಬಳಕೆಯಾಗುತ್ತಿದೆ. ಮಿಲಿಟರಿ ಸಂಸ್ಕೃತಿಯಲ್ಲಿ ಹಿಂಸೆ,

ಬೆದರಿಕೆ ಮೂಲಕ ಗಂಡಸರು ತಮಗೆ ಬೇಕಿರುವುದನ್ನ ಪಡೆಯಲು ಅಂಗೀಕಾರವಿದೆ.

೨ನೇ ಮಹಾ ಯುದ್ಧದಲ್ಲಿ ಮೌನವಾಗುಳಿದ ಹಿಂಸೆಯ ಕತೆಯ ಮೂಲಕ ಇದನ್ನ ನಿರೂಪಿಸಬಯಸುತ್ತೇನೆ. ಹಿಂಸೆಗೆ ಬಲಿಯಾದವರು ಮೌನ ಮುರಿಯದೇ ಈ ಅಪರಾಧ ೫೦ ವರ್ಷಗಳ ತನಕ ಗುಟ್ಟಾಗಿ ಉಳಿದಿತ್ತು. ಜಪಾನಿನ ಸಾಮ್ರಾಜ್ಯಶಾಹಿ ಸೈನ್ಯ, ಸರ್ಕಾರ ಮತ್ತು ಚಕ್ರವರ್ತಿ ಏಷಿಯಾದ ಮಹಿಳೆಯರ ಮೇಲೆ ಹೂಡಿದ ಈ ಯುದ್ಧದ ಬಗ್ಗೆ ಚರಿತ್ರೆಯಲ್ಲಿ ಯಾವ ಪ್ರಸ್ತಾಪವೂ ಇಲ್ಲ. ಇದು ಅಮಾನುಷ, ವ್ಯವಸ್ಥಿತ ಮತ್ತು ವ್ಯಾಪಕ ಜನಾಂಗದ್ವೇಷಿ ಹಿಂಸೆ. ಇಂತಹ ಹಿಂಸೆ ಹಿಂದೆಂದೂ ಇಲ್ಲದಷ್ಟು ಪ್ರಮಾಣದಲ್ಲಿತ್ತು. ಮಹಿಳೆಯರಿಗೆ ಮನುಷ್ಯ ಘನತೆಯ ಮೂಲಭೂತ ಹಕ್ಕನ್ನೇ ನಿರಾಕರಿಸಿತು. ಮಹಿಳೆಯರ ಘನತೆ ಗೌರವಗಳನ್ನು ಛಿದ್ರಗೊಳಿಸಿದ ಯುದ್ಧ ಈ ಹಿಂಸೆಗೆ ಬಲಿಯಾದ ಮಹಿಳೆಯರನ್ನು ಜಪಾನಿ ಸೈನ್ಯ ಅನುಕೂಲಕರ ಭಾಷೆಯಲ್ಲಿ 'ಮಿಲಿಟರಿ ದಾಸಿಯರು' ಎಂದು ಹೇಳಿಕೊಂಡಿತು.

೨ನೇ ಮಹಾಯುದ್ಧದಲ್ಲಿ ಜಪಾನಿನ ಸರ್ಕಾರ, ಸೈನ್ಯ ಸಾಂಸ್ಥಿಕಗೊಳಿಸಿದ ಅತ್ಯಾಚಾರ ಮತ್ತು ಲೈಂಗಿಕ ಗುಲಾಮಗಿರಿಗೆ ಸುಮಾರು

## ನನ್ನಲ್ಲೀಗ ಕಣ್ಣೀರು ಮತ್ತು ನೆಪಗಳಿಲ್ಲ



*ಲೋಲ ಫಿಡೆನ್ಷಿಯಾ ಡೇವಿಡ್, ಫಿಲಿಪ್ಪೈನ್ಸ್*

ಎಲ್ಲವನ್ನೂ ಸೂರೆ ಹೊಡೆದಿದ್ದಾರೆ
ಪ್ರೀತಿ, ಚೈತನ್ಯ, ಪ್ರೇಮದ ಒರತೆ ಕಾಣದ
ಈ ನಗರಗಳಂತೆ ಎರಕ ಹೊಯ್ದ ನನ್ನ ಶರೀರ
ಮತ್ತು ಮನಸ್ಸಾಕ್ಷಿ ಮಾತ್ರ ಕೆರಳುತ್ತದೆ ಪ್ರತಿದಿನ
ಘೋರ ಉತ್ತರಕ್ಕಾಗಿ ಒತ್ತಾಯಿಸುತ್ತ
ಮುಖ ಮುಚ್ಚಿಕೊಳ್ಳುತ್ತೇನೆ ಬೊಗಸೆಯಲ್ಲಿ
ಆದರೆ ನನ್ನಲ್ಲೀಗ ಕಣ್ಣೀರು ಮತ್ತು ನೆಪಗಳಿಲ್ಲ

-ಅನ್ನಾ ಅಕಮತೋವಾ

*ನಾನು ಹುಟ್ಟಿದ್ದು ೭ ನವೆಂಬರ್ ೧೯೨೭ ಡಸೋಲ್ ಪಂಗಾಸಿನಾಮಿನ ಬಾರಿಯೊ ಮ್ಯಾಗ್ಗಸ್ಸೇಯಲ್ಲಿ. ಮನೆಯಲ್ಲಿ ನಾವು ಮೂವರು; ತಂದೆ, ತಾಯಿ ಮತ್ತು ರೈತಾಪಿಗಳು.*

*೧೯೪೧-೪೨ರಲ್ಲಿ ಡಸೋಲ್‌ಗೆ ಜಪಾನಿ ಸೈನಿಕರು ಬರುವ ಮೊದಲೇ ಅವರ ಬರವಿನ ಬಗ್ಗೆ ನಮಗೆ ತಿಳಿದಿತ್ತು. ಬಂದ ತಕ್ಷಣ ಅಡಗಿಕೊಳ್ಳಲು ಸಾಧ್ಯವಾಗುವಂತೆ ಬಾರಿಯೋನಲ್ಲಿ ನಮ್ಮ ಕುಟುಂಬ ಮತ್ತು ಇತರ ಜನ ಸೇರಿ ಸುರಂಗ ಮಾಡಿಕೊಂಡಿದ್ದೆವು. ೧೯೪೨ರಲ್ಲಿ ಅವರು ಬಂದ ಕೂಡಲೇ ಸುರಂಗ ಹೊಕ್ಕೆವು. ಆಗ ನನಗೆ ೧೪ ವರ್ಷ ವಯಸ್ಸು. ಜಪಾನಿ ಸೈನಿಕರಿಗೆ ನಮ್ಮ ಸುಳಿವು ಸಿಗದಂತೆ ಸುರಂಗದ ಬಾಯನ್ನು ಬಿದಿರು, ಗಿಡದ ರೆಕ್ಕೆಗಳಿಂದ ಮುಚ್ಚುತ್ತಿದ್ದೆವು. ಬಾರಿಯೋ ಮ್ಯಾಗ್ಗಸ್ಸೇಯಲ್ಲಿ ದಾಳಿ ನಡೆಸಿದಾಗ ಅವರಿಗೆ ನಮ್ಮನ್ನು ಕಾಣಲು ಸಾಧ್ಯವಾಗಲೇ ಇಲ್ಲ. ಎರಡು ದಿವಸಗಳ ಅನಂತರ ಅವರು ಹೊರಟು ಹೋಗಿದ್ದಾರೆ ಎಂದು ತಿಳಿದು ಸುರಂಗಗಳಿಂದ ಹೊರಬಂದೆವು. ನಂತರ ಜಪಾನಿ ಸೈನಿಕರು ಬಾರಿಯೋ ಮ್ಯಾಗ್ಗಸ್ಸೇಯ ನಮ್ಮ ಮನೆಗಳಿಗೆ ನುಗ್ಗಿ, ಅಲ್ಲಿ ಯಾರನ್ನೂ ಕಾಣದೇ ಹತಾಶರಾಗಿ ಮನೆ ಮತ್ತು ನಮಗೆ ಸೇರಿದ ವಸ್ತುಗಳನ್ನು ಸುಟ್ಟುಹಾಕಿದರು. ನಮ್ಮ ಮನೆಯನ್ನ ಮಾತ್ರ ಸುಟ್ಟು, ಬೇರೆ ಮನೆಗಳಿಂದ ಆಹಾರ ಮತ್ತು ಇತರೆ ವಸ್ತುಗಳನ್ನು ಲೂಟಿ ಮಾಡಿದ್ದರು. ಈ ಘಟನೆಯ ಅನಂತರ ನಮ್ಮ ಹಳೆಯ ಮನೆಯಿಂದ ೫ ಮೀಟರು ದೂರದಲ್ಲಿ ಪುಟ್ಟ ಮನೆ ಕಟ್ಟಿಕೊಳ್ಳಲು ನಿರ್ಧರಿಸಿದೆವು. ಹೊಸ ಮನೆಗೆ ಬಂದ ೨ ದಿವಸಗಳ ನಂತರ ನಾನು ಮತ್ತು ನನ್ನ ಅಜ್ಜಿ ಡಸೋಲ್ ಪಟ್ಟಣದಲ್ಲಿ ತರಕಾರಿ ಮತ್ತು ಹಣ್ಣು ವ್ಯಾಪಾರ ಶುರುಮಾಡಿದೆವು.*

*ವ್ಯಾಪಾರಕ್ಕೆ ಹೊರಟ ಮೊದಲದಿನ ನಾನು ಮತ್ತು ಅಜ್ಜಿ ಬೇರೆ ಬೇರೆ ದಾರಿ ಹಿಡಿದೆವು. ನಾನು ಮಾರುಕಟ್ಟೆ ಪ್ರವೇಶಿಸುತ್ತಿದ್ದಾಗ ಅನೇಕ ಜಪಾನಿ ಸೈನಿಕರು ಹತ್ತಿರ ಬರುವಂತೆ ನನ್ನೆಡೆಗೆ ಕೈ ಬೀಸುತ್ತಿದ್ದರು. ಆಗ ಬೆಳಗಿನ ೮ ಘಂಟೆ ಸಮಯ, ನನ್ನ ತಲೆಮೇಲೆ ಬಿಲಾವು (ಪುಟ್ಟಿ) ಇತ್ತು. ಜಪಾನಿ ಸೈನಿಕರ ಬಗ್ಗೆ ನನಗೆ ಭಯ. ಹೀಗಾಗಿ ಅವರು ಕರೆದಾಗ ನಾನು ಹೋಗಲಿಲ್ಲ. ಜಪಾನಿ ಸೈನಿಕರೊಂದಿಗೆ ಈ ವಿಷಯದಲ್ಲಿ ಸಹಯೋಗ ಹೊಂದಿದ್ದ ಫಿಲಿಪಿನೊ ಮನುಷ್ಯ ನನ್ನ ಹತ್ತಿರ ಬಂದು, 'ನೀನು ಜಪಾನಿ ಸೈನಿಕರ ಹತ್ತಿರ ಹೋಗೋದಿಲ್ಲವಾ? ಅವರು ನಿನ್ನ ತಲೆ ಕಡಿದು ಹಾಕುತ್ತಾರೆ' ಎಂದು ಬೆದರಿಸಿದ. ನನಗೆ ತುಂಬ ಭಯವಾಯಿತು. ಜಪಾನಿ ಸೈನಿಕರ ಹತ್ತಿರ ಹೋದೆ. ಅವರಲ್ಲಿ ಒಬ್ಬ ಸೈನಿಕ ಮುಂದೆ ಬಂದು ನನ್ನ ಕಪಾಳಕ್ಕೆ ಬಾರಿಸಿದ, ಉಳಿದ ಸೈನಿಕರು ನೋಡುತ್ತ ನಿಂತಿದ್ದರು. ಒಂದು ಕೊಳಗ ನೀರು ತಂದು, ಕುಡಿಯುವಂತೆ ನನ್ನನ್ನು ಒತ್ತಾಯಿಸಿದರು. ಆ ನೀರನ್ನು ಪೂರ್ತಿಯಾಗಿ ಕುಡಿಯಲು ನನ್ನಿಂದ ಸಾಧ್ಯವಾಗಲಿಲ್ಲ. ಅದನ್ನು ನನ್ನ ಮೇಲೆ ಎರಚಿದರು. ನನ್ನ ಕಪಾಳಕ್ಕೆ ಹೊಡೆದ ಸೈನಿಕ ಚಾಕು ತೆಗೆದುಕೊಂಡು ನನ್ನ ಕಿವಿ ಹಿಡಿದು, ರಕ್ತ ಒಸರುವ ತನಕ ಸೀಳಿದ. ಆಮೇಲೆ ಅವರು ಹಗ್ಗ ತಂದು, ನನ್ನ ಕೈಗಳನ್ನು ಬೆನ್ನ ಹಿಂದಕ್ಕೆ ಬಿಗಿದು ಕಟ್ಟಿದರು. ಅಷ್ಟರಲ್ಲಿ ನನ್ನನ್ನು ಕಂಡ ಅಜ್ಜಿ ರಕ್ಷಣೆಗಾಗಿ ಮುಂದೆ ಬಂದಳು.*

*ನಾವು ಡಸೋಲ್ ಪಟ್ಟಣದ ಪುರಸಭೆ ಎದುರು ನಿಂತಿದ್ದೆವು. ಅದು ಜಪಾನಿ ಸೈನಿಕ ಪಾಳಯವಾಗಿ ಪರಿವರ್ತನೆ ಹೊಂದಿತ್ತು. ಸಾರ್ವಜನಿಕ ಮಾರುಕಟ್ಟೆ ಪಕ್ಕದಲ್ಲಿತ್ತು. ಪುರಸಭೆ ಹಜಾರದಲ್ಲಿ ಅನೇಕ ಫಿಲಿಪಿನಿಯನ್ನರು ಸಾಲಾಗಿ ನಿಂತಿರುವುದು ಕಾಣಿಸಿತು. ಬಿಸಿಲಿಗೆ ಅವರೆಲ್ಲ ಒಣಗಿದ್ದರು. ಅವರ ಕೈಗಳನ್ನು ಕಟ್ಟಿಹಾಕಲಾಗಿತ್ತು. ನನ್ನ ಅಜ್ಜಿಯ ಕೈಗಳನ್ನು ಕೂಡ ಕಟ್ಟಿಹಾಕಿ, ಬಿಸಿಲಲ್ಲಿ ನಿಂತಿದ್ದ ಇತರರ ಜೊತೆ ನಿಲ್ಲುವಂತೆ ಸೈನಿಕರು ಒತ್ತಾಯಿಸಿದರು. ನನ್ನ ಕಿವಿಯಲ್ಲಿ ರಕ್ತ ಸುರಿಯುತ್ತಿತ್ತು. ನೋವಿನಿಂದ ಕಿರುಚಿಕೊಳ್ಳುತ್ತಿದ್ದೆ. ಮಧ್ಯಾಹ್ನ ೧೨ ಘಂಟೆ ತನಕ ಬಿಸಿಲಲ್ಲಿ ನಿಂತಿದ್ದೆವು.*

*ನಂತರ ಅವರು ನಮ್ಮನ್ನು ಸೈನಿಕ ಪಾಳಯದೊಳಕ್ಕೆ ತಳ್ಳಿದರು. ಅಡುಗೆ ಮಾಡುವಂತೆ, ಬಟ್ಟೆ ತೊಳೆದು, ಕಸ ಗುಡಿಸುವಂತೆ ಅವರು ನನ್ನನ್ನು ಒತ್ತಾಯಿಸಿದರು. ರಾತ್ರಿಯಾದಾಗ ನನ್ನನ್ನು ಇತರ ನಾಲ್ವರು ಮಹಿಳೆಯರ ಜೊತೆ ಒಂದು ಕೋಣೆಯಲ್ಲಿ ಕೂಡಿಹಾಕಿದರು. ಕೋಣೆಯಲ್ಲಿ ಕತ್ತಲು ಕವಿದಿತ್ತು.*

೨,೫೦,೦೦೦ ಮಹಿಳೆಯರು ಬಲಿಯಾಗಿದ್ದಾರೆಂದು ಚರಿತ್ರಕಾರರು ಮತ್ತು ಸಂಶೋಧಕರು ಅಂದಾಜು ಮಾಡಿದ್ದಾರೆ. ಈ ಮಹಿಳೆಯರು ಕೊರಿಯಾ, ತೈವಾನ, ಚೀನ, ಫಿಲಿಪ್ಪೈನ್ಸ್, ಇಂಡೋನೇಷಿಯಾ, ಮಲೇಷಿಯಾ ಮತ್ತು ಇತರ ಆಕ್ರಮಿತ ಪ್ರದೇಶಗಳಿಗೆ ಸೇರಿದವರು. ಅವರ ಪೈಕಿ ಕೆಲವು ಡಚ್ ಮಹಿಳೆಯರೂ ಇದ್ದಾರೆ. ಈ ಕಾರ್ಯಾಚರಣೆ ಬಗ್ಗೆ ಜಪಾನಿ ಸರ್ಕಾರ ಈತನಕ ಯಾವ ಹೊಣೆಗಾರಿಕೆಯನ್ನೂ ಹೊತ್ತಿಲ್ಲ. ಇದರ ಹಿಂದಿನ ಸಂಪೂರ್ಣ ಕತೆ ಮತ್ತು ಸೈನಿಕರ ಸೇವೆಗಾಗಿ ಮಹಿಳೆಯರನ್ನ ಒತ್ತಾಯಪೂರ್ವಕವಾಗಿ ಬಳಸಿಕೊಳ್ಳಬೇಕು ಎಂಬ ಸೈನ್ಯಾಧಿಕಾರಿಗಳ ಸೂಚನೆ ಮತ್ತು ನೀತಿಗಳನ್ನು ಒಳಗೊಂಡ ಕಡತಗಳನ್ನ ಈ ತನಕ ಬಹಿರಂಗಗೊಳಿಸಿಲ್ಲ. ಜಪಾನ್ ಸರ್ಕಾರ ಈ ಯುದ್ಧ ಅಪರಾಧಗಳನ್ನು ಗುಟ್ಟಾಗಿಡಲು ನಿರ್ಧರಿಸಿತು. ಈ ಪದ್ಧತಿಗೆ ಬಲಿಯಾದ ಮಹಿಳೆಯರು ತಮ್ಮ ದುರಂತ ಕತೆಗಳನ್ನ ಹೇಳಿಕೊಳ್ಳುವ ತನಕ ಇದು ಗುಟ್ಟಾಗಿಯೇ ಉಳಿದಿತ್ತು.

ಮಿಲಿಟರಿ ದಾಸ್ಯ ಪದ್ಧತಿಗೆ ಬಲಿಯಾದ ಮಹಿಳೆಯರ ಕತೆಗಳು ಈಗಾಗಲೇ ಜಗತ್ತಿನ ಕಿವಿಗೆ ಬಿದ್ದಿವೆ. ವಿಯೆನ್ನಾ, ಬೀಜಿಂಗ್, ಜಿನೀವಾ ಮತ್ತು ನ್ಯೂಯಾರ್ಕ್ ನಗರಗಳಲ್ಲಿ ವಿಶ್ವಸಂಸ್ಥೆ ತನ್ನ ಜಾಗತಿಕ ಸಭೆಗಳನ್ನು

*ಮೂಲೆಯಲ್ಲಿ ಒಂದು ಅನಿಲದ ದೀಪ ಮಾತ್ರ ಉರಿಯುತ್ತಿತ್ತು. ಅನಂತರ ಜಪಾನಿ ಸೈನಿಕರು ಒಳಪ್ರವೇಶಿಸಿದರು. ಅವರಲ್ಲಿ ಒಬ್ಬ ಎಳೆದುಕೊಂಡು ನನ್ನ ಮೇಲೆ ಅತ್ಯಾಚಾರ ಎಸಗಿದ. ನಾನು ಕಿರುಚಿ, ನುಣುಚಿಕೊಳ್ಳಲು ಪ್ರಯತ್ನಿಸಿದೆ. ಆಗ ಅವರು ನನ್ನ ಬಾಯಿಗೆ ಬಟ್ಟೆ ತುರುಕಿ ಸುಮ್ಮನಿರಿಸಿದರು. ಅವನ ನಂತರ ಇನ್ನಿಬ್ಬರು ಸೈನಿಕರು ನನ್ನ ಮೇಲೆ ಎರಗಿದರು. ಇದಾದ ನಂತರ ಏನಾಗುತ್ತಿದೆ ಎಂಬುದು ತಿಳಿಯದಂತೆ ನಾನು ಪ್ರಜ್ಞೆ ಕಳೆದುಕೊಂಡಿದ್ದೆ. ತುಂಬಾ ನಿಶ್ಶಕ್ತಳಾಗಿದ್ದೆ, ಉಳಿದ ಮಹಿಳೆಯರಿಗೆ ಕೂಡ ಇದೇ ಗತಿ ಒದಗಿ ಬಂದಿತ್ತು. ಈ ಘಟನೆ ನಡೆದಾಗ ನಾನಿನ್ನೂ ಋತುಮತಿಯಾಗಿರಲಿಲ್ಲ.*

*ಮರುದಿನ ಮಧ್ಯಾಹ್ನದ ತನಕ ನನ್ನನ್ನು ಸುಡುಬಿಸಿಲಲ್ಲಿ ನಿಲ್ಲಿಸಿದರು. ಮಧ್ಯಾಹ್ನದ ನಂತರ, ಹಿಂದಿನ ದಿವಸ ನನಗೆ ವಹಿಸಿದ್ದ ಕೆಲಸಗಳನ್ನೆಲ್ಲ ಮಾಡಿದೆ. ರಾತ್ರಿಯಾದಾಗ ಸುಮಾರು ೩-೪ ಜಪಾನಿ ಸೈನಿಕರು ನನ್ನ ಮೇಲೆ ಅತ್ಯಾಚಾರ ಎಸಗಲು ಮುಂದಾದರು. ಸಾಮಾನ್ಯವಾಗಿ ಅವರು ರಾತ್ರಿ ೯ ಘಂಟೆಗೆ ಬಂದು, ಬೆಳಗಿನ ತನಕ ಪೀಡಿಸುತ್ತಿದ್ದರು. ಇದು ಹತ್ತು ದಿವಸಗಳ ತನಕ ಮುಂದುವರೆಯಿತು. ಹನ್ನೊಂದನೆ ದಿನ ಜಪಾನಿ ಸೈನಿಕರು ಇದ್ದಕ್ಕಿದ್ದಂತೆ ನಮ್ಮನ್ನು ಬಿಡುಗಡೆಗೊಳಿಸಿ ಕಳಿಸಿದಾಗ ನನಗೆ, ಅಜ್ಜಿಗೆ ಆಶ್ಚರ್ಯ. ಇದಾದ ನಂತರ ನನಗೆ ಗೊತ್ತಾಯಿತು, ಇಬ್ಬರು ಫಿಲಿಪಿನೋ ಬಂಡಾಯಗಾರರು ನಮ್ಮ ಮನೆಯಲ್ಲಿ ವಾಸವಿದ್ದ ವಿಷಯವನ್ನು ಜಪಾನಿ ಸೈನಿಕರು ಪತ್ತೆ ಹಚ್ಚಿದ್ದರು. ಬಂಡಾಯಗಾರರು ನಮ್ಮ ಮನೆಯಲ್ಲಿ ಉಳಿದುಕೊಳ್ಳಲು ಅಪ್ಪನ ಅನುಮತಿ ಕೇಳಿದ್ದರು. ಅವರು ಮನೆಯಲ್ಲಿ ಉಳಿದುಕೊಳ್ಳುವುದು ಅಪ್ಪನಿಗೆ ಇಷ್ಟವಿರಲಿಲ್ಲ, ಆದರೂ ನಿರಾಕರಿಸಲು ಅವರಿಗೆ ಸಾಧ್ಯವಾಗಿರಲಿಲ್ಲ. ಬಿಡುಗಡೆ ಮಾಡಿ, ನಮಗೆ ಅರಿವಾಗದಂತೆ ಅವರು ನಮ್ಮನ್ನು ಹಿಂಬಾಲಿಸಿದರು. ನಾನು ಮತ್ತು ಅಜ್ಜಿ ನಡೆದುಹೋಗುತ್ತಿದ್ದಾಗ ಜಪಾನಿ ಸೈನಿಕರು ಹಿಂದೆ ಬಿದ್ದಿರುವುದು ನಮ್ಮ ಗಮನಕ್ಕೆ ಬಂತು. ಮನೆಗೆ ಮರಳುವ ಹಾದಿಯಲ್ಲಿ ನಾವು ಒಂದು ಮನೆ ಮಗ್ಗುಲಲ್ಲಿ ಹಾದು ಹೋಗಬೇಕಾಯಿತು. ಆ ಮನೆಯನ್ನು ಕೂಡ ಜಪಾನಿಯರು ಆಕ್ರಮಿಸಿಕೊಂಡಿದ್ದರು. ಜಪಾನಿ ಸೈನಿಕರು ಮತ್ತು ಅವರೊಡನಿದ್ದ ಮಾಕಪಿಲಿ (ದಲ್ಲಾಳಿ) ನಮ್ಮನ್ನ ನೋಡಿದ. ನಮ್ಮನ್ನು ಮತ್ತೆ ಮಿಲಿಟರಿ ಪಾಳೆಯದೊಳಕ್ಕೆ ತಳ್ಳಿದರು, ಆಗ ಬೆಳಗಿನ ೧೦ ಗಂಟೆ. ಅಡುಗೆ ಮಾಡುವಂತೆ ಅವರು ನಮ್ಮನ್ನ ಒತ್ತಾಯಿಸಿದರು. ಅಲ್ಲಿ ಇನ್ನೂ ಕೆಲವು ಮಹಿಳೆಯರಿದ್ದರು. ಅಂದು ಸಂಜೆ ನನ್ನ ಅಜ್ಜಿ, ಅಲ್ಲಿದ್ದ ಮಹಿಳೆಯರು ಮತ್ತು ನನ್ನ ಮೇಲೆ ಅತ್ಯಾಚಾರ ಎಸಗಿದರು. ಅಜ್ಜಿಯ ಚೀತ್ಕಾರ ಕೇಳಿಸುತ್ತಿತ್ತು. ಮರುದಿನ ಬೆಳಿಗ್ಗೆ ಅವರು ನಮ್ಮನ್ನು ಪಾಳಯದಿಂದ ಕಳಿಸಿಬಿಟ್ಟರು. ನಾವು ಮನೆಯ ದಾರಿ ಹಿಡಿದೆವು.*

*ಕೊನೆಗೂ ಬಾರಿಯೋ ಮ್ಯಾಗ್ಗಸ್ಸೇಯ ನಮ್ಮ ಮನೆ ತಲುಪಿ, ಮನೆ ಅಂಗಳಕ್ಕೆ ಹೆಜ್ಜೆಯಿಡುವಷ್ಟರಲ್ಲಿ ನಮ್ಮ ಮನೆಯಲ್ಲಿ ವಾಸವಾಗಿದ್ದು ಹೋಗಿದ್ದ ಇಬ್ಬರು ಫಿಲಿಪಿನೋ ಬಂಡಾಯಗಾರರು ನಮ್ಮ ಬೆನ್ನ ಹಿಂದಿದ್ದ ಜಪಾನಿ ಸೈನಿಕರನ್ನ ಕಂಡು, ನಾವೇ ಉದ್ದೇಶ ಪೂರ್ವಕವಾಗಿ ಕರೆದು ತಂದಿರುವುದಾಗಿ ತಪ್ಪು ತಿಳಿದು ಅವರ ಕಡೆಗೆ ಗುಂಡು ಹಾರಿಸತೊಡಗಿದರು. ಒಬ್ಬ ಜಪಾನಿ ಸೈನಿಕ ನೆಲಕ್ಕುರುಳಿದ. ತಮ್ಮಲ್ಲಿನ ಒಬ್ಬನು ಗಾಯಗೊಂಡಿದ್ದನ್ನು ಕಂಡ ಜಪಾನಿ ಸೈನಿಕರು ನನ್ನ ಅಜ್ಜಿಯ ಕಡೆಗೆ ಗುಂಡು ಹಾರಿಸಿದರು. ಅಜ್ಜಿ ನೆಲಕ್ಕುರುಳಿದಳು. ಅಜ್ಜಿಯ ರಕ್ಷಣೆಗೆ ಪ್ರಯತ್ನಿಸಿದೆ, ಆದರೆ ದಿಗ್ಭ್ರಮೆಗೊಂಡು ಸುಮ್ಮನೆ ನಿಂತುಬಿಟ್ಟೆ. ಅನೇಕ ಸುತ್ತಿನ ಗುಂಡಿನ ಚಕಮಕಿ ಅವಧಿಯಲ್ಲಿ ಸೈನಿಕನೊಬ್ಬ ನನ್ನನ್ನು ಗದ್ದೆಗೆ ಎಳೆದುಕೊಂಡು ಹೋದ, ಇನ್ನೊಬ್ಬ ಹಿಂಬಾಲಿಸುತ್ತಿದ್ದ. ಅಪ್ಪ ಕರೆದುಕೊಂಡು ಹೋಗುವ ತನಕ ನಾನು ಗದ್ದೆಯಲ್ಲೇ ಬಿದ್ದಿದ್ದೆ. ಅಲ್ಲಿಂದ ಹೊರಟ ಜಪಾನಿ ಸೈನಿಕರು ಇಬ್ಬರು ಫಿಲಿಪಿನೋ ಬಂಡಾಯಗಾರರ ಶವಗಳನ್ನು ತಂದರು.*

*ಕೆಲವು ದಿವಸಗಳ ಅನಂತರ ಮತ್ತೆ ನಮ್ಮ ಮನೆಗೆ ಬಂದ ಜಪಾನಿ ಸೈನಿಕರು ನನ್ನ ಮೇಲೆ ಅತ್ಯಾಚಾರ ಎಸಗಿದರು. ಸಾಮಾನ್ಯವಾಗಿ ೩-೫ ಸೈನಿಕರು ಮನೆಗೆ ಬರುತ್ತಿದ್ದರು. ಹೀಗೆ ಒಂದು ತಿಂಗಳು ಕಳೆಯಿತು. ನನ್ನ ಮೇಲೆ ಅತ್ಯಾಚಾರ ಎಸಗಿದ ಅನಂತರ ಮನೆಯಿಂದ ಆಹಾರ ಪದಾರ್ಥಗಳನ್ನು ದೋಚಿಕೊಂಡು ಹೋಗುತ್ತಿದ್ದರು. ಜಪಾನೀಯರು ಬಂದ ಪ್ರತಿಸಲ ನನ್ನ ಕುಟುಂಬದವರೆಲ್ಲ ಸುರಂಗದಲ್ಲಿ ಅಡಗಿಕೊಳ್ಳುತ್ತಿದ್ದರು. ಮನೆಯಲ್ಲಿ ನಾನೊಬ್ಬಳೇ ಇರುತ್ತಿದ್ದೆ. ನನ್ನ ಅಪ್ಪ, 'ಜಪಾನಿ ಸೈನಿಕರು ನಿನ್ನನ್ನೇನು ಕೊಂದುಬಿಡುವುದಿಲ್ಲ, ನಾವೆಲ್ಲರೂ ಅನುಭವಿಸಲೇ ಬೇಕಾಗಿರುವ ಈ ವಿಧಿಯನ್ನ ಸುಮ್ಮನೆ ಒಪ್ಪಿಕೊಳ್ಳುವುದು ಒಳ್ಳೆಯದು' ಎಂದು ಹೇಳುತ್ತಿದ್ದರು.*

*ಹೀಗೆ ನನ್ನ ಕುಟುಂಬ ಅಸಹಾಯಕತೆ, ದುರ್ಬಲತೆಯ ಸುಳಿಯಲ್ಲಿ ಸಿಕ್ಕಿಕೊಂಡಿತ್ತು. ನಾವು ಎಷ್ಟು ಭಯಗೊಂಡಿದ್ದೆವೆಂದರೆ ಇದನ್ನು ಬಿಟ್ಟು ಬೇರೆ ದಾರಿಯೇ ಇರಲಿಲ್ಲ.*

*ಒಂದು ತಿಂಗಳ ಅನಂತರ ಜಪಾನಿ ಸೈನಿಕರು ನಮ್ಮ ಮನೆಗೆ ಬರುವುದನ್ನು ನಿಲ್ಲಿಸಿದರು; ಬಹುಶಃ ಅವರು ಇನ್ನೊಂದು ಪ್ರದೇಶಕ್ಕೆ ತೆರಳಿದ್ದರು. ಇದು ಯುದ್ಧಕಾಲದ ನನ್ನ ಅನುಭವ. ಈಗಲೂ ನಾನು ಆ ಗಾಯಗಳ ನೋವನ್ನ ಅನುಭವಿಸುತ್ತಿದ್ದೇನೆ.*

*೧೯೫೨ರಲ್ಲಿ ನನಗೆ ಮಣಿಲಾ ನಗರಕ್ಕೆ ವರ್ಗಾವಣೆಯಾಯಿತು, ೧೯೫೪ರಲ್ಲಿ ಮದುವೆಯಾದೆ. ನನಗೆ ಎಂಟು ಮಂದಿ ಮಕ್ಕಳು.*

*೧೯೯೨ ಡಿಸೆಂಬರ್‌ನಲ್ಲಿ ಸ್ನೇಹಿತರ ಉತ್ತೇಜನದಿಂದ ನಾನು 'ಫಿಲಿಪಿನೋ ಕಂಫರ್ಟ್‌ವುಮನ್ ಕಾರ್ಯಪಡೆ' (LILA PHILIPPINO)ಯನ್ನು ಸಂಪರ್ಕಿಸಲು ನಿರ್ಧರಿಸಿದೆ. ಅಲ್ಲಿ ನಾನು ನನ್ನಂತಹ ಇತರೆ ಮಹಿಳೆಯರನ್ನು ಭೇಟಿಯಾದೆ.*

*೫೦ ವರ್ಷಗಳ ಅನಂತರ ನನ್ನ ಜೀವನದ ಭಯಾನಕ ಅನುಭವಗಳನ್ನು ಹೇಳಿಕೊಂಡು ಮನಸ್ಸು ನಿರಾಳವಾಗುತ್ತಿದೆ. ವೇದನೆ, ಲಜ್ಜೆ, ಕೆಟ್ಟ ಕನಸು, ಕಸಿವಿಸಿಗಳು ನನ್ನನ್ನು ಈ ತನಕ ಪೀಡಿಸುತ್ತಿದ್ದವು.* ●

ನಡೆಸಿದ ಸ್ಥಳಗಳಲ್ಲಿ ಈ ಕತೆಗಳನ್ನು ಹೇಳಲಾಗಿದೆ. ವಿವಿಧ ದೇಶಗಳಲ್ಲಿ ನಡೆದ ಯುದ್ಧಗಳ ಹಿಂಸೆ, ಅತ್ಯಾಚಾರಕ್ಕೆ ಬಲಿಯಾದ ಮಹಿಳೆಯರಲ್ಲಿ ಈ ಕತೆಗಳು ಪ್ರತಿಧ್ವನಿಸಿವೆ. ಆದರೆ ವಿಯೆಟ್ನಾಂ ಯುದ್ಧ ಮತ್ತು ಬಾಂಗ್ಲಾ ಸೈನಿಕರ ಅತ್ಯಾಚಾರಕ್ಕೊಳಗಾದ ಮಹಿಳೆಯರ ಕತೆಗಳಿನ್ನೂ ಜಗತ್ತಿನ ಕಿವಿಗೆ ಬಿದ್ದಿಲ್ಲ. ಥಾಯ್ಲೆಂಡ್ ಗಡಿ ಪ್ರದೇಶದಲ್ಲಿ ಬರ್ಮಾದ ಕ್ಯಾರೆನ್ ಜನಾಂಗದ ಮಹಿಳೆಯರ ಮೇಲೆ, ಬರ್ಮಾ ಸೈನಿಕರು ಮತ್ತು UNTAC ಸೈನಿಕರಿಂದ ಕಾಂಬೋಡಿಯಾದ ಮಹಿಳೆಯರ ಮೇಲೆ ನಡೆದ ಅತ್ಯಾಚಾರ, ಛಿದ್ರಗೊಂಡಿರುವ ಸೋಮಾಲಿಯಾದಲ್ಲಿ ಮಹಿಳೆಯರ ಮೇಲೆ ನಡೆದ ಅತ್ಯಾಚಾರಗಳೆಲ್ಲವೂ ಯುದ್ಧಕ್ಕೆ ಸಂಬಂಧಿಸಿದ ದುರಂತ ಕತೆಗಳು. ಫಿಲಿಪೈನ್ಸ್ ದೇಶದಲ್ಲಿ ನಾವು 'ಏಷಿಯಾ ಮಹಿಳಾ ಮಾನವ ಹಕ್ಕುಗಳ ಪರಿಷತ್ತಿ'ನ ಮೂಲಕ ರೂಪಿಸಿದ ಶಾಂತಿಯಾತ್ರೆಯನ್ನು ಮಿಂದಾನೋ ದ್ವೀಪದಲ್ಲಿ ಅಂತಿಮಗೊಳಿಸಿದೆವು. ಮಿಂದಾನೋ ದ್ವೀಪದಲ್ಲಿ ಸರ್ಕಾರಿ ಸೈನಿಕರು ಮುಸ್ಲಿಂ ಮಹಿಳೆಯರ ಮೇಲೆ ನಡೆಸಿದ ಅತ್ಯಾಚಾರಗಳನ್ನು ಕುರಿತಂತೆ ನಮಗೆ ಒಂದು ದಾಖಲೆ ತಲುಪಿದೆ. ಅಲ್ಲಿ, ಮೊರೊ ಗೆರಿಲ್ಲಾ ಹೋರಾಟಗಾರರು ಸ್ವಾಯತ್ತ ಗಣರಾಜ್ಯಕ್ಕಾಗಿ ಹೋರಾಟ ನಡೆಸುತ್ತಿದ್ದರು. ಹಿಂದಿನ ಅಧ್ಯಕ್ಷರ ನೀತಿ ಪರಿಣಾಮಕಾರಿಯಾಗಿ ಜಾರಿಯಾಗುವಂತೆ ನೋಡಿಕೊಳ್ಳಲು, ಮುಸ್ಲಿಂ ಜನಾಂಗ ವಾಸಿಸುತ್ತಿದ್ದ ಪ್ರದೇಶಗಳಲ್ಲಿ ಮೊರೊ ಗೆರಿಲ್ಲಾಗಳನ್ನು ಸರ್ವನಾಶ ಮಾಡಲು ಸೈನಿಕ ಪಡೆಗಳನ್ನು ನಿಯೋಜಿಸಲಾಗಿತ್ತು. ಆ ಪ್ರದೇಶದ ಮಹಿಳೆಯರು ಅನುಭವಿಸಿದ ನೋವು, ಹತಾಶೆ ಮತ್ತು ನಡೆದ ಪಾತಕಗಳನ್ನು ಕಲ್ಪಿಸಿಕೊಳ್ಳಲು ಕೂಡ ಸಾಧ್ಯವಿಲ್ಲ. ಇದರಿಂದ ಮುಸ್ಲಿಮರನ್ನು ಸ್ಥಳಾಂತರಿಸಬೇಕಾಯಿತು.

ಹಿಂದೆ ಮಿಲಿಟರಿ ದಾಸಿಯಾಗಿದ್ದು, ಘಾತುಕ ಹಿಂಸೆಯಿಂದ ಬದುಕಿ ಉಳಿದ ಹೆಣ್ಣಿನ ಶಕ್ತಿಯುತ ಸಾಕ್ಷಿಪತ್ರವನ್ನು ೧೯೯೧ರಲ್ಲಿ ಕೊರಿಯಾದ ಮಹಿಳೆ ಮಂಡಿಸಿದರು. ಇದು ಜಪಾನ್ ಮಿಲಿಟರಿಯ ಅತ್ಯಾಚಾರ ಮತ್ತು ಲೈಂಗಿಕ ಗುಲಾಮಗಿರಿ ಪ್ರಕರಣಗಳನ್ನು ಬೆಳಕಿಗೆ ತಂದಿತು. ಮಿಲಿಟರಿ ದಾಸಿಯರನ್ನು ಸೈನಿಕರು ಖಾಸಗಿ ಮೋಜಿಗಾಗಿ ಮಾತ್ರ ಏರ್ಪಡಿಸಿಕೊಂಡಿರಲಿಲ್ಲ. ಜಪಾನಿ ಸರ್ಕಾರ ಮತ್ತು ಸಾಮ್ರಾಜ್ಯಶಾಹಿ ಸೈನ್ಯವು, ಸೈನಿಕರಿಗಾಗಿ ವ್ಯವಸ್ಥಿತ ರೀತಿಯಲ್ಲಿ 'ಕಂಫರ್ಟ್ ಸ್ಟೇಷನ್' ಅಥವಾ 'ಸೈನಿಕ ವೇಶ್ಯಾಗೃಹ'ಗಳನ್ನು ಸ್ಥಾಪಿಸಿತ್ತು. ಇದು ಸರ್ಕಾರಿ ನಿಯೋಜಿತ ಮಹಿಳಾ ವಿರೋಧಿ ಹಿಂಸೆ.

ಜಪಾನಿ ರಕ್ಷಣಾ ಇಲಾಖೆ ದಾಖಲೆಗಳಲ್ಲಿ ಇವರನ್ನು jugun ianfu ಅಥವಾ 'ಮಿಲಿಟರಿ ದಾಸಿ'ಯರು (comfort women) ಎಂದು ಕರೆಯಲಾಗಿದೆ. ಇವರು ಜಪಾನಿನ ಆಕ್ರಮಣಕ್ಕೊಳಗಾದ ಏಷಿಯಾದ ಪ್ರಾಂತಗಳಿಗೆ ಸೇರಿದ ಮಹಿಳೆಯರು. ಜಪಾನಿ ಸಾಮ್ರಾಜ್ಯಶಾಹಿ ಸೈನ್ಯವು ಮಹಿಳೆಯರನ್ನು ತಮ್ಮ ಉಪಯೋಗ ಮತ್ತು ಮೋಜಿಗೆ ಇರುವ ಸರಕುಗಳು ಎಂಬಂತೆ ನಡೆಸಿಕೊಂಡಿತು. ಜಪಾನಿಸೈನ್ಯ ತನ್ನ ಶಸ್ತ್ರಸಜ್ಜಿತ ಸೈನ್ಯಾಧಿಕಾರಿಗಳಿಗೆ ಕೊಟ್ಟ ಲಿಖಿತ ಸೂಚನೆಗಳಲ್ಲಿ ಮಹಿಳೆಯರನ್ನು ಯುದ್ಧಶಸ್ತ್ರಾಸ್ತ್ರಗಳಿಗೆ ಹೋಲಿಸಿ ವರ್ಗೀಕರಿಸಿತ್ತು. ಸೈನ್ಯದ ಸಕಲ ಸೌಕರ್ಯಗಳನ್ನೂ ಬಳಸಿಕೊಂಡು, ಬೇರೆ ಬೇರೆ ದೇಶಗಳಿಂದ ಮಹಿಳೆಯುರನ್ನು ವ್ಯವಸ್ಥಿತ ಒತ್ತಾಯದಿಂದ ಅಪಹರಿಸಲಾಗುತ್ತಿತ್ತು. 'ಕಂಫರ್ಟ್ ಸ್ಟೇಷನ್ಸ್' ಎಂಬ ಮೋಜುದಾಣಗಳ ಸ್ಥಾಪನೆ, ನಿಯಂತ್ರಣ ಮತ್ತು ನಿರ್ವಹಣೆ ಸೈನಿಕ ವ್ಯವಸ್ಥೆಯ ಅವಿಭಾಜ್ಯ ಅಂಗಗಳಾಗಿದ್ದುವು.

೧೯೩೭ರಲ್ಲಿ ಜಪಾನ್, ಚೀನಾ ದೇಶದ ಮೇಲೆ ಆಕ್ರಮಣ ನಡೆಸುವ ಹೊತ್ತಿಗೆ ಮಂಚೂರಿಯ, ತೈವಾನ್, ಫಿಲಿಪೈನ್ಸ್, ಕೊರಿಯಾ, ದಕ್ಷಿಣಸಮುದ್ರ ದ್ವೀಪಗಳು, ಡಚ್‌ಈಸ್ಟ್‌ಇಂಡೀಸ್ ಮತ್ತು ಮಲೇಷಿಯಾಗಳಲ್ಲಿ ಸುವ್ಯವಸ್ಥಿತ ಮೋಜುದಾಣಗಳನ್ನು ಅಧಿಕೃತವಾಗಿ ಸ್ಥಾಪಿಸಲಾಯಿತು. ಅವರಲ್ಲಿ ಹೆಚ್ಚಿನವರು ೧೧ರಿಂದ ೨೦ ವರ್ಷ ವಯಸ್ಸಿನ ಹುಡುಗಿಯರು. ಅವರನ್ನು ಬಲವಂತವಾಗಿ ತಡೆಹಿಡಿದು ನಿರಂತರ ಅತ್ಯಾಚಾರ ಎಸಗಲಾಯಿತು. ಕೊರಿಯಾ ದೇಶದ ಮಹಿಳೆಯರನ್ನು ಬಳಸಿಕೊಂಡ ಸಾಮ್ರಾಜ್ಯಶಾಹಿ ಜಪಾನ್ ಸರ್ಕಾರದ ಅಧಿಕಾರಿಗಳು ಉತ್ತಮ ಸಂಬಳಕ್ಕೆ ಕಾರ್ಖಾನೆಗಳಲ್ಲಿ ಕೆಲಸ ಕೊಡಿಸುವ ಆಮಿಷ ಒಡ್ಡಿದ್ದರು. ಈ ಎಲ್ಲ ಮಹಿಳೆಯರು ತಾವು ಮಿಲಿಟರಿ ದಾಸಿಯರಾಗುತ್ತೇವೆ ಎಂಬ ಕಲ್ಪನೆಯೂ ಇಲ್ಲದೇ ಮನೆಬಿಟ್ಟು ಬಂದಿದ್ದರು. ಅವರಲ್ಲಿ ಬಹುಪಾಲು ಬಾಲಕಿಯರು ಲೈಂಗಿಕತೆ ಮತ್ತು ಅದರ ಅರ್ಥ ಕೂಡ ಗೊತ್ತಿರದ ಮುಗ್ಧರು.

ಮಿಲಿಟರಿ ದಾಸಿಯರ ಪೈಕಿ ಶೇ ೩೦ಕ್ಕಿಂತ ಕಡಿಮೆ ಮಂದಿ ಯುದ್ಧ ಮುಗಿಯುವ ವೇಳೆಗೆ ಈ ಕ್ರೂರ ವಿಧಿಯಿಂದ ಬಿಡುಗಡೆ ಪಡೆದರು ಎಂದು ಅಂದಾಜು ಮಾಡಿದ್ದಾರೆ. ಯುದ್ಧ ಮುಗಿಯುತ್ತಿದ್ದಂತೆ ಜಪಾನಿ ಸೈನಿಕರು ಮಿಲಿಟರಿ ದಾಸಿಯರನ್ನು ತೊರೆದರು, ಮಿಲಿಟರಿ ಶಿಬಿರಗಳಲ್ಲಿ ಕೆಲವು ಮಿಲಿಟರಿ ದಾಸಿಯರನ್ನು ನೇಣಿಗೆ ಹಾಕಿದರು. ಉಳಿದವರು ಜಪಾನಿ ಸೈನಿಕರೊಂದಿಗೆ ಆತ್ಮಹತ್ಯೆ ಮಾಡಿಕೊಳ್ಳುವಂತೆ ಆಜ್ಞೆ ಹೊರಡಿಸಲಾಯಿತು. ಉಳಿದ ದೇಶಗಳಲ್ಲಿ ಅವರನ್ನು ಕಾಲುವೆಗಳಿಗೆ ಹಾಕಿ ಕೊಂದರು. ಬಹಳಷ್ಟು ಮಹಿಳೆಯರನ್ನು ಸಾಮ್ರಾಜ್ಯಶಾಹಿ ಸೈನ್ಯ ತೊರೆದುಬಿಟ್ಟಿತು. ಅವರು ತಮ್ಮ ಮನೆಗಳಿಗೆ ಮರಳಲು ಪಡಬಾರದ ಕಷ್ಟ ಪಡಬೇಕಾಯಿತು.

ಮಹಿಳೆಯರನ್ನು ಲೈಂಗಿಕ ದಾಸಿಯರನ್ನಾಗಿ ಬಳಸಿಕೊಳ್ಳಲು ಜಪಾನಿನ ಸಾಮ್ರಾಜ್ಯಶಾಹಿ ಸೈನ್ಯ ಮತ್ತು ಸರ್ಕಾರಕ್ಕೆ ಇದ್ದ ವ್ಯವಸ್ಥಿತ ನೀತಿಯ ಮೂಲಗಳ ಕುರಿತು ನಾವಿಂದು ವಿಶ್ವ ಮಹಿಳಾ ನ್ಯಾಯಾಲಯದಲ್ಲಿ ಆಳವಾದ ಚಿಂತನೆ ನಡೆಸಬೇಕಿದೆ. ಯುದ್ಧ ಮತ್ತು ಮಿಲಿಟರಿ ಸಂಸ್ಕೃತಿಗಳು ಪೌರುಷ ಪ್ರಧಾನ ವಿಚಾರ ಮತ್ತು ಸಾಂಸ್ಕೃತಿಕ ರಚನೆಗಳ ಆಧಾರ ಹೊಂದಿರುವ ಮೇಲರಿಮೆ, ಪ್ರಾಬಲ್ಯ ಮತ್ತು ಪರಿಶುದ್ಧತೆ ಎಂಬ ಕಲ್ಪನೆಗಳನ್ನು ಹೊಂದಿವೆ. ಯಾವುದೇ ದೇಶ ಅಥವಾ ಗುಂಪು ಇನ್ನೊಂದು ದೇಶ ಅಥವಾ ಗುಂಪಿನ ಮೇಲೆ ಬಲಪ್ರಯೋಗ ಮಾಡುವ, ಆಳುವ, ನಿಂದಿಸುವ ಆಕ್ರಮಣಶೀಲ ಪ್ರವೃತ್ತಿ, ಅಧಿಕಾರ ದುರುಪಯೋಗ ಮತ್ತು ಲೈಂಗಿಕ ಹಿಂಸೆಯನ್ನೇ ತಾತ್ವಿಕಗೊಳಿಸಿಕೊಂಡಿರುವ ಪೌರುಷ ಪ್ರಧಾನ ಸಂಸ್ಕೃತಿ ಮತ್ತು ಮೌಲ್ಯಗಳು, ಯುದ್ಧ ಮತ್ತು ಮಿಲಿಟರಿ ಸಂಸ್ಕೃತಿಗಳನ್ನು ಜನಾಂಗ ದ್ವೇಷದ ತಳಹದಿಯ ಮೇಲೆ ಕಟ್ಟಲಾಗಿದ್ದು, ಇವು ಜನಾಂಗ ಶುದ್ಧೀಕರಣ, ಲೈಂಗಿಕ ಹಿಂಸೆ, ಹೊರತುಪಡಿಸುವಿಕೆ, ದಿವಾಳಿ ಎಬ್ಬಿಸುವಿಕೆ, ಸಾಮೂಹಿಕ ನರಮೇಧ ಮುಂತಾದ ಘಾತುಕತನಗಳ ಮೂಲಕ ದೇಶ ಮತ್ತು ಜನಾಂಗಗಳ ಮನದಲ್ಲಿ ಆಳವಾದ ಗಾಯಗಳನ್ನು ಮಾಡುತ್ತವೆ. ದೀರ್ಘಕಾಲದಲ್ಲಿ ಶಾಂತಿ ಸ್ಥಾಪನೆಗೆ ಭಂಗವುಂಟುಮಾಡುತ್ತವೆ ಮತ್ತು ಮೂಲಭೂತ ಮಾನವ ಹಕ್ಕುಗಳನ್ನು ಉಲ್ಲಂಘಿಸುತ್ತವೆ. ಶಸ್ತ್ರಸಜ್ಜಿತ ಕದನಗಳು, ಅನ್ಯಾಯ-ಅಸಮಾನತೆಯ ಸಾಂಸ್ಕೃತಿಕ ಸಾಮಾಜಿಕ ರಚನೆಗಳು, ಜನಾಂಗ ದ್ವೇಷಿ ಅಂತರ್ಯುದ್ಧಗಳು ಮುಂತಾದ ಜಾಗತೀಕರಣ ವಿಷಮತೆಗಳು ಲಿಂಗಾಧರಿತ ಹಿಂಸೆ, ಅತ್ಯಾಚಾರ ಮತ್ತು ಮಹಿಳಾ ವಿರೋಧಿ ಯುದ್ಧಗಳಾಗಿ ಪರಿಣಮಿಸುತ್ತವೆ. ಮಾನವ ಹಕ್ಕುಗಳ ಗೌರವ, ಮನುಷ್ಯರು ಮತ್ತು ಮಹಿಳೆಯರ ಘನತೆ, ಜನಸಮುದಾಯಗಳ ಸಮಗ್ರತೆ

# ಮಿಲಿಟರಿ ದಾಸಿಯರ ಬಗ್ಗೆ ಅಮೆರಿಕದ ಉದಾಸೀನ

೧೯೪೫ ಆಗಸ್ಟ್ ೧೫ರಂದು ಜಪಾನ್ ಶರಣಾಯಿತು. ೨ ವಾರಗಳ ಅನಂತರ ಅಮೇರಿಕ ಜಪಾನನ್ನು ಆಕ್ರಮಿಸಿಕೊಳ್ಳತೊಡಗಿತು. ಜಪಾನಿನ ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕ ವ್ಯವಸ್ಥೆಯನ್ನು ಪ್ರಜಾತಾಂತ್ರಿಕಗೊಳಿಸುವುದು ಈ ಆಕ್ರಮಣದ ಉದ್ದೇಶ. ಒಕ್ಕೂಟ ರಾಷ್ಟ್ರಗಳ ಮೇಲೆ ಯುದ್ಧಪ್ರಚೋದನೆ ಮಾಡಿದ್ದಕ್ಕಾಗಿ 'ಟೋಕಿಯೊ ಯುದ್ಧ ಅಪರಾಧಗಳ ನ್ಯಾಯಾಲಯ' ಸ್ಥಾಪನೆ ಮಾಡಲಾಯಿತು. ತಮ್ಮ ಸೈನಿಕ ಪಡೆಗಳೇ ಎಸಗಿದ ಅನೇಕ ಯುದ್ಧ ಅಪರಾಧಗಳಿಗೆ ಇವರು ಅಂತಿಮ ಹೊಣೆಗಾರರಾಗಿದ್ದರು. ಎರಡೂವರೆ ವರ್ಷಗಳ ಕಾಲ ಅಸ್ತಿತ್ವದಲ್ಲಿದ್ದ ಈ ನ್ಯಾಯಾಲಯದಲ್ಲಿ ಒಕ್ಕೂಟ ರಾಷ್ಟ್ರಗಳ ಸೈನಿಕರು ಮತ್ತು ದಾಳಿಕೋರರಲ್ಲದವರ ಮೇಲೆ ಜಪಾನೀಯರು ಎಸಗಿದ ಅತ್ಯಾಚಾರ, ಕೊಲೆ, ಕಿರುಕುಳ ಮುಂತಾದ ಯುದ್ಧ ಅಪರಾಧಗಳ ಬಗ್ಗೆ ಸಾಕ್ಷಿಗಳನ್ನು ಮಂಡಿಸಲಾಯಿತು. ಆದರೆ ಹಿಂದೆಂದೂ ಇಲ್ಲದ ಪ್ರಮಾಣದ ಮಾನವತಾವಿರೋಧಿ ಅಪರಾಧ ಎನಿಸಿಕೊಂಡ ಮಿಲಿಟರಿ ಲೈಂಗಿಕ ದಾಸ್ಯದ ವಿಷಯ ವಿಚಾರಣೆಗೆ ಬರಲೇ ಇಲ್ಲ! ಅಮೆರಿಕದ ಅಧಿಕಾರಿಗಳಿಗೆ ಇದರ ಬಗ್ಗೆ ಏನೂ ಗೊತ್ತಿರಲಿಲ್ಲ ಎಂಬುದು ಈ ಉದಾಸೀನದ ಅರ್ಥವಾ ?

ಇಲ್ಲ, ೨ನೇ ಮಹಾಯುದ್ಧ ಮುಕ್ತಾಯವಾಗುವುದಕ್ಕೆ ತುಂಬಾ ಮೊದಲೇ ಜಪಾನೀಯ ರಾಜಸೇನೆ ಸಂಘಟಿಸುತ್ತಿದ್ದ ಮಿಲಿಟರಿ ಲೈಂಗಿಕ ದಾಸಿಯರ ವ್ಯವಸ್ಥೆಯ ಬಗ್ಗೆ ಅವರಿಗೆ ಸಂಪೂರ್ಣ ಗೊತ್ತಿತ್ತು.

ಮಿಲಿಟರಿ ದಾಸಿಯರ ಸಮಸ್ಯೆ ಒಂದು ಪ್ರಮುಖ ಯುದ್ಧ ಅಪರಾಧ ಎಂಬ ಅರಿವು ಒಕ್ಕೂಟ ರಾಷ್ಟ್ರಗಳ ನಾಯಕರ ಮನಸಲ್ಲಿ ಯಾಕಿರಲಿಲ್ಲ? ಒಂದು ಮಾತ್ರ ಸ್ಪಷ್ಟವಾಗಿದೆ, ಬಲಾತ್ಕಾರದಿಂದ ಮಿಲಿಟರಿ ದಾಸಿಯರಾಗಿದ್ದ ಬಹುಪಾಲು ಮಹಿಳೆಯರು ಏಷಿಯನ್ನರು. ಒಕ್ಕೂಟ ರಾಷ್ಟ್ರಗಳ ನಾಗರಿಕರಾಗಲೀ, ಬಿಳಿ ಹೆಂಗಸರಾಗಲೀ ಇದರಲ್ಲಿ ಇರಲಿಲ್ಲ. ನಾವು ಕಂಡಿರುವಂತೆ, ಡಚ್ ಮಹಿಳೆಯರು ಮತ್ತು ತರುಣಿಯರನ್ನು ದಾಸಿಯರನ್ನಾಗಿ ಬಲಾತ್ಕರಿಸಿದ್ದಕ್ಕಾಗಿ ಜಪಾನಿ ಅಧಿಕಾರಿಗಳ ವಿಚಾರಣೆ ನಡೆಸಿದ ಡಚ್‌ಪಡೆಗಳು ಬಲಿಯಾದ ಇಂಡೋನೇಷಿಯಾ ಮಹಿಳೆಯರ ಬಗ್ಗೆ ತನಿಖೆ ನಡೆಸುವ ಗೋಜಿಗೆ ಕೈ ಹಾಕಲಿಲ್ಲ. ಚರಿತ್ರಕಾರರೊಬ್ಬರು ಟೋಕಿಯೊ ಯುದ್ಧ ಅಪರಾಧಗಳ ನ್ಯಾಯಾಧಿಕರಣದಲ್ಲಿನ ಏಷಿಯಾದ ಗೈರುಹಾಜರನ್ನು ಎತ್ತಿ ತೋರಿದ್ದಾರೆ. ಇದು ಮಿಲಿಟರಿ ದಾಸಿಯರ ಸಮಸ್ಯೆಯನ್ನು ಉದಾಸೀನ ಮಾಡಲಾಗಿದೆ ಎಂದು ಸ್ಪಷ್ಟಪಡಿಸುತ್ತದೆ. ಬಲಾತ್ಕಾರದಿಂದ ಸೈನಿಕ ಗುಲಾಮಗಿರಿಗೆ ಒಳಗಾದ ಮಹಿಳೆಯರ ಮೇಲಿನ ಘೋರ ಅಪರಾಧಗಳನ್ನು ಚರಿತ್ರೆ ಹಿಂದೆಂದೂ ಕಾಣದ ಮಾನವತಾವಿರೋಧಿ ಅಪರಾಧ ಎಂದು ಪರಿಗಣಿಸಲು ಅರ್ಧ ಶತಮಾನ ಬೇಕಾಯಿತು.

ಯುದ್ಧ ಕಾಲದಲ್ಲಿ ಮಹಿಳಾ ವಿರೋಧಿ ಸೈನಿಕ ಹಿಂಸಾಚಾರವು ಅತಿರೇಕಗಳಿಗೆ ಹೋಗುತ್ತದೆ ಮತ್ತು ಮಿಲಿಟರಿಗೆ ಸೇರಿದವರು ಮಹಿಳೆಯರನ್ನು ಲೈಂಗಿಕವಾಗಿ ಪೀಡಿಸುವ ಪ್ರವೃತ್ತಿ ಯುದ್ಧಕಾಲಕ್ಕಷ್ಟೇ ಸೀಮಿತವಲ್ಲ. ಶಾಂತಿಕಾಲದಲ್ಲಿ ಕೂಡ ಲೈಂಗಿಕ ಹಿಂಸಾಚಾರದ ಬಗ್ಗೆ ಪ್ರಬಲ ಒಲವು ಬೆಳಸಿಕೊಂಡಿರುತ್ತಾರೆಂಬ ವಾದವನ್ನು ಮಿಲಿಟರಿ ನೆಲೆಗಳ ವೇಶ್ಯಾಗಾರಿಕೆ ಕುರಿತ ಅಧ್ಯಯನ ಬೆಂಬಲಿಸುತ್ತದೆ.

ಉದಾಹರಣೆ : ಫಿಲಿಪೈನ್ಸ್‌ನಲ್ಲಿ ಅಮೆರಿಕ ೧೯೯೨ರ ತನಕ ಹೊಂದಿದ್ದ ಮಿಲಿಟರಿ ನೆಲೆಗಳಲ್ಲಿ ಸೈನಿಕರು ಎಸಗಿದ ಲೈಂಗಿಕ ಹಿಂಸಾಚಾರ ಫಿಲಿಪೈನ್ಸಿನ ಸೂಬಿಕ್ ಕೊಲ್ಲಿಯಲ್ಲಿ ದೀರ್ಘಕಾಲೀನ ಪರಿಣಾಮಗಳನ್ನು ಬೀರಿದೆ. ಒಕಿನಾವ ಮತ್ತು ಕೊರಿಯಾದ ಅಮೆರಿಕ ಮಿಲಿಟರಿ ನೆಲೆಗಳ ಹತ್ತಿರ ವಾಸಿಸುವವರು ಆತಂಕದ ಪರಿಸ್ಥಿತಿಯಲ್ಲಿದ್ದಾರೆ. ಒಕಿನಾವದ ಮಹಿಳೆಯರ ಮೇಲಿನ ಮಿಲಿಟರಿ ಹಿಂಸಾಚಾರ, ಅಮೆರಿಕದ ಮಿಲಿಟರಿ ಅಧಿಕಾರಿಗಳು ನಿಯಂತ್ರಿಸುತ್ತಿದ್ದ ಕ್ಲಾಂಡೆಸ್ಟೈನ್ ವೇಶ್ಯಾಗಾರಗಳ ಹೊರತಾಗಿ ಒಕಿನಾವ ಕದನದ ನಂತರವೂ ಮುಂದುವರೆಯುತ್ತಿದೆ. ಉದಾಹರಣೆಗೆ ೧೯೫೫ರಲ್ಲಿ ಇಷಾಕಾವ ನಗರದಲ್ಲಿನ ಗಾಯಾಮಾಯುಮಿಕೊ ಎಂಬ ೬ ವರ್ಷದ ಬಾಲಕಿಯನ್ನು ಕಾಡಿನಾ ಮಿಲಿಟರಿ ಅಧಿಕಾರಿಯೊಬ್ಬ ಕದ್ದು, ಅತ್ಯಾಚಾರ ಎಸಗಿ ಕೊಂದು ಹಾಕಿದ. ಕಳೆದ ಅರ್ಧಶತಮಾನದಲ್ಲಿ ಒಕಿನಾವದಲ್ಲಿ ಅಮೆರಿಕ ಸೈನಿಕರು ಎಸಗಿರುವ ಅನೇಕ ಲೈಂಗಿಕ ಅಪರಾಧಗಳ ಪೈಕಿ ಇದೂ ಒಂದು. ಅಂಗಡಿಯಿಂದ ಮನೆಗೆ ಮರಳುತ್ತಿದ್ದ ೧೨ ವರ್ಷದ ಒಕಿನಾವನ್ ಹುಡುಗಿಯನ್ನು ಅಪಹರಿಸಿ ಅತ್ಯಾಚಾರ ಎಸಗಿದ ಪ್ರಕರಣ ತುಂಬಾ ಸುದ್ದಿಯಾಯಿತು. ಈ ಪ್ರಕರಣ ಒಕಿನಾವದ ಅಮೆರಿಕ ಮಿಲಿಟರಿ ನೆಲೆಗಳ ವಿರುದ್ಧ ಜನ ರೊಚ್ಚಿಗೇಳುವಂತೆ ಮಾಡಿತು. ಕೊರಿಯಾ ದೇಶದಲ್ಲಿ ಕೂಡ ೧೯೬೭–೮೭ರ ನಡುವಿನ ೨೦ ವರ್ಷಗಳ ಅವಧಿಯಲ್ಲಿ ೭೨ ಅತ್ಯಾಚಾರ ಪ್ರಕರಣಗಳು ವರದಿಯಾಗಿವೆ. ಅಮೆರಿಕದ ಸೈನಿಕರ ವಿರುದ್ಧ ಮಹಿಳೆಯರ ಮೇಲಿನ ಶಾರೀರಿಕ ಹಲ್ಲೆ ಮತ್ತು ಹಿಂಸಾಚಾರದ ಅನೇಕ ಪ್ರಕರಣಗಳು ದಾಖಲಾಗಿವೆ. ಕೊರಿಯಾದಲ್ಲಿ ದಿಗ್ಭ್ರಮೆ ಹುಟ್ಟಿಸಿದ ಪ್ರಕರಣ ಎಂದರೆ, ಅಮೆರಿಕದ ರಿಕ್ರಿಯೇಷನ್ ಕ್ಲಬ್‌ನಲ್ಲಿ ನೌಕರಳಾಗಿದ್ದ ೨೬ ವರ್ಷ ವಯಸ್ಸಿನ ಯುನ್‌ಕುಮಿ ಎಂಬ ಮಹಿಳೆಯ ಕಗ್ಗೊಲೆ. ಅಮೆರಿಕದ ಯುವ ಸೈನಿಕನೊಬ್ಬ ಆಕೆಯನ್ನು ಕೊಂದುಹಾಕಿದ. ಆಕೆಯ ಕಳೇಬರದ ಮೇಲೆ ವಿಪರೀತ ಗಾಯದ ಗುರುತುಗಳಿದ್ದವು, ಬಿಯರ್ ಮತ್ತು ಕೋಕ್ ಬಾಟಲಿಗಳನ್ನ ಆಕೆಯ ಯೋನಿಗೆ ತುರುಕಲಾಗಿತ್ತು.

ಒಕಿನಾವ, ಕೊರಿಯಾ, ಫಿಲಿಪೈನ್ಸ್ ನುತ್ತು ಜಪಾನ್ ದೇಶಗಳಲ್ಲಿ ಅಮೆರಿಕದ ಸೈನಿಕರ ಸೇವೆ ಮಾಡುತ್ತಿರುವ ಸೆಕ್ಸ್ ವರ್ಕರ್‌ಗಳು ಲೈಂಗಿಕ ಹಿಂಸಾಚಾರ ಎದುರಿಸುತ್ತಿದ್ದಾರೆ. ವೇಶ್ಯೆಯರು ಎಂಬ ಒಂದೇ ಹೆಸರಿನ ಕಾರಣ ದಿನನಿತ್ಯ ಸಾರ್ವಜನಿಕ ಸುದ್ದಿಯಾಗುತ್ತಾರೆ. ಮಿಲಿಟರಿ ನೆಲೆಗಳ ಸುತ್ತ ಸೆಕ್ಸ್ ಉದ್ದಿಮೆ ನಿಲ್ಲುವ ಯಾವುದೇ ಸೂಚನೆ ಕಂಡುಬರುತ್ತಿಲ್ಲ. ಸಮಕಾಲೀನ ಮಿಲಿಟರಿ ವೇಶ್ಯಾಗಾರಿಕೆಗಳ ಬಗ್ಗೆ ಮಾಡಿರುವ ತಮ್ಮ ಅಧ್ಯಯನದಲ್ಲಿ ಸಿಂಥಿಯಾ ಎನ್ಲೋ ಅವರು ಸ್ಪಷ್ಟವಾಗಿ ಹೇಳಿರುವಂತೆ ತಮ್ಮ ಮಿಲಿಟರಿ ಪೌರುಷವನ್ನು ಆಗಾಗ ಖಚಿತಪಡಿಸಿಕೊಳ್ಳುತ್ತಿರಲು ಸಾಮಾನ್ಯವಾಗಿ ಮಿಲಿಟರಿ ಸಂಘಟನೆಗಳಿಗೆ ವೇಶ್ಯೆಯರು ಒದಗಿಸುವ ಸೇವೆಯ ಅವಶ್ಯಕತೆಯಿರುತ್ತದೆ. ಸೈನಿಕರು ತಮ್ಮ ಪೌರುಷವನ್ನು ಶತ್ರುವೆಂದು ತಿಳಿಯಲಾಗಿರುವವರ ಮೇಲೆ ಶಾಂತಿಕಾಲದಲ್ಲಿ ಕೂಡ ಪ್ರಯೋಗಿಸುತ್ತಿರುತ್ತಾರೆ. ಯಾರನ್ನು ಶತ್ರುವೆಂದು ತಿಳಿದಿರಲಾಗುತ್ತದೋ ಅವರಿಗೆ ತಮ್ಮ ಪ್ರಾಬಲ್ಯವನ್ನು ಪ್ರತಿಕ್ಷಣ ನೆನಪಿಸುತ್ತಿರಬೇಕೆಂದು ನಿರೀಕ್ಷಿಸಲಾಗುತ್ತದೆ. ಅಂತಹ ತರಬೇತಿಯನ್ನು ಕೂಡ ಸೈನಿಕರಿಗೆ ಕೊಟ್ಟಿರುತ್ತಾರೆ. ಸೈನಿಕನೆಂದರೆ ಗಡುಸಾದ ಒರಟುಮನುಷ್ಯ ಅಂತಾ ನೆನಪು ಮಾಡುವ ಉಢಾಳತನ.

ಆದ್ದರಿಂದ ಮಿಲಿಟರಿ ವೇಶ್ಯಾಗಾರಿಕೆಗಳು ಇತರೆ ವಾಣಿಜ್ಯ ಸೆಕ್ಸ್ ಮಾರುಕಟ್ಟೆಗಳಿಗಿಂತ ಭಿನ್ನ. ಅಂದರೆ ಮಿಲಿಟರಿ ನಿಯಂತ್ರಿತ ವೇಶ್ಯಾಗಾರಿಕೆಗಳನ್ನು ಸಹಿಸಿಕೊಳ್ಳುವುದಷ್ಟೇ ಅಲ್ಲ, ಮಿಲಿಟರಿ ಮತ್ತು ಸರ್ಕಾರಿ ಅಧಿಕಾರಿಗಳು ಅದಕ್ಕೆ ಒಳಗಿನವರಾಗಿರುತ್ತಾರೆ. ಸೈನಿಕನೊಬ್ಬ ತನ್ನ ಆಕ್ರಮಣಶೀಲತೆಯನ್ನು ತೀವ್ರಗೊಳಿಸಿಕೊಳ್ಳಲು ಅವನ ಪುರುಷತ್ವವನ್ನ ಉತ್ತೇಜಿಸುತ್ತಾರೆ. ಆದ್ದರಿಂದ ಮಿಲಿಟರಿ ನೆಲೆಗಳ ಸಮೀಪದ ಪ್ರದೇಶಗಳಲ್ಲಿ ಮಿಲಿಟರಿ ನಿಯಂತ್ರಿತ ವೇಶ್ಯಾಗೃಹಗಳು ಇರುವಾಗಲೂ ಮಹಿಳೆಯರ ಮೇಲೆ ಭಾರಿಮಟ್ಟದ ಲೈಂಗಿಕ ಹಿಂಸಾಚಾರಗಳನ್ನು ಎಸಗಿದ್ದರೆ ಅದರಲ್ಲಿ ಆಶ್ಚರ್ಯವೇನೂ ಇಲ್ಲ. ಯುದ್ಧ ಮತ್ತು ಶಾಂತಿಕಾಲಗಳೆರಡರಲ್ಲೂ ಸೈನಿಕರು ಎಸಗುವ ಹಿಂಸಾಚಾರಗಳು ಮಿಲಿಟರಿ ಸಂಸ್ಕೃತಿಯ ಲೈಂಗಿಕ ಪೌರುಷವನ್ನು ತೋರುತ್ತವೆ. ಇದು ರಾಷ್ಟ್ರೀಯತೆಗೆ ಹೊರತಾದ, ಎಲ್ಲ ಮಿಲಿಟರಿ ಸಂಘಟನೆಗಳ ಮೂಲ ಸ್ವಭಾವ. ●

ಮತ್ತು ಶಾಂತಿ ಸ್ಥಾಪನೆಗಾಗಿ ಎಲ್ಲಾ ಬಗೆಯ ಯುದ್ಧಗಳನ್ನೂ ನಿರ್ಮೂಲನ ಮಾಡುವುದು ತುಂಬಾ ಮುಖ್ಯ.

ಮಿಲಿಟರಿ ದಾಸಿಯರಾಗಿದ್ದು ಬದುಕುಳಿದ ಮಹಿಳೆಯರ ಹಕ್ಕುಗಳ ಮಾನ್ಯತೆ ಮತ್ತು ಪುನರ್ವಸತಿಯನ್ನು ಜಪಾನಿನ ಸರ್ಕಾರಗಳು ತಿರಸ್ಕರಿಸುತ್ತಲೇ ಬಂದಿವೆ. ಸರ್ಕಾರದ ಕಾನೂನಾತ್ಮಕ ಪರಿಹಾರ ಮತ್ತು ಜಪಾನಿನ ಅಧಿಕೃತ ಕ್ಷಮಾಯಾಚನೆಗಾಗಿ ಅವರು ನಡೆಸುತ್ತಿರುವ ಹೋರಾಟಗಳು ಯುದ್ಧ ಕಾಲದಲ್ಲಿ ಅಥವಾ ಶಾಂತಿಕಾಲದಲ್ಲಿ ಮಹಿಳೆಯರ ಮೇಲೆ ಹಿಂಸೆ ಮುಂದುವರೆಯ ದಂತೆ ತಡೆಯುವ ಒಳ್ಳೆಯ ಉದ್ದೇಶಗಳನ್ನು ಹೊಂದಿವೆ. ಈ ಹಿಂಸೆಯ ವಿರುದ್ಧ ಮಿಲಿಟರಿ ದಾಸಿಯರಾಗಿದ್ದ ಮಹಿಳೆಯರು ಮಾತನಾಡುತ್ತಲೆ ಇರುತ್ತಾರೆ. ಏಷಿಯಾದ ದೇಶಗಳಲ್ಲಿ ಜಪಾನ್ ನಡೆಸಿದ ಆಕ್ರಮಣಗಳ ವಿರುದ್ಧ, ಬಲಿಯಾದ ಮಹಿಳೆಯರ ಬಗ್ಗೆ ಜಪಾನ್ ಸರ್ಕಾರ ಹೊಣೆಗಾರಿಕೆ ಹೊರದೆ ತಿರಸ್ಕಾರ ಮಾಡು ತ್ತಿರುವುದರ ವಿರುದ್ಧ ಮತ್ತು ಮಹಿಳೆಯರು ಮತ್ತು ಬಾಲಕಿಯರನ್ನು ಸುಲಭ ಗುರಿಯಾಗಿಟ್ಟುಕೊಳ್ಳುವ ಎಲ್ಲ ಹಿಂಸೆ, ದಮನ ಮತ್ತು ಯುದ್ಧಗಳ ವಿರುದ್ಧ ಮಾತನಾಡುತ್ತಲೇ ಇರುತ್ತಾರೆ.

ಇಂದು ಶಾಂತಿಗಾಗಿ ನಡೆಯುತ್ತಿರುವ ಯುದ್ಧವಿರೋಧಿ ವಿಶ್ವಮಹಿಳಾ ನ್ಯಾಯಾಲಯದಲ್ಲಿ ಹಿಂದೆ ಮಿಲಿಟರಿ ದಾಸ್ಯದಲ್ಲಿದ್ದು ಬಿಡುಗಡೆಯಾಗಿ ಬದುಕುಳಿದ ಮಹಿಳೆಯರಿಗೆ ಮತ್ತು ಎಲ್ಲ ಯುದ್ಧಗಳಲ್ಲಿ ಬದುಕುಳಿದ ಮಹಿಳೆಯರಿಗೆ ನಮಸ್ಕರಿಸುತ್ತಿದ್ದೇನೆ. ಫಿಲಿಪಿನೊ ಮಹಿಳೆಯರ ಬಗ್ಗೆ ನಿರ್ದಿಷ್ಟವಾಗಿ ಹೇಳಬೇಕೆಂದರೆ, ನಮ್ಮ ದೇಶದಲ್ಲಿ ಅವರನ್ನು ಲೋಲಾ (ಅಜ್ಜಿಯರು) ಎಂದು ಕರೆಯುತ್ತೇವೆ. ಅವರ ಪೈಕಿ ಮೂವರು ಅಜ್ಜಿಯರು ಇಂದು ವಿಶ್ವಮಹಿಳಾ ನ್ಯಾಯಾಲಯದಲ್ಲಿ ಭಾಗವಹಿಸಲು ಬಂದಿದ್ದಾರೆ. ಕಳೆದ ಒಂಬತ್ತು ವರ್ಷಗಳಿಂದ ಮಹಿಳಾ ಮಾನವ ಹಕ್ಕುಗಳ ಚಳವಳಿಯಲ್ಲಿ ನಾನು ಅವರ ಆಪ್ತ ಒಡನಾಟದಲ್ಲಿ ಕೆಲಸ ಮಾಡಿದ್ದೇನೆ. ಸಾಮಾಜಿಕ ತಿರಸ್ಕಾರ ಮತ್ತು ನಿಷೇಧದಿಂದ ಅವರು ತುಂಬಾ ಬಳಲಿದ್ದಾರೆ. ತಾವು ದಾಸಿಯರಾಗಿದ್ದ ಕಾರಣ ತಮ್ಮಲ್ಲಿ ಹುಟ್ಟಿದ ಕಸಿವಿಸಿಯ ಭಾವನೆಗಳನ್ನು ಅವರು ಎದುರಿಸಬೇಕಾಯಿತು. ತಮಗೆ ಸಿಗಬೇಕಾದ ಸಾಮಾಜಿಕ ಗೌರವ, ಸಂತಸ ಮತ್ತು ಬದುಕಿನ ಚೆಲುವಿನಿಂದ ವಂಚಿತರಾಗಿದ್ದಾರೆ. ಸಾರ್ವಜನಿಕವಾಗಿ ತಮ್ಮ ದುಃಖದ ಕತೆಗಳನ್ನು ಹೇಳಿಕೊಳ್ಳಲು ಮನಸ್ಸು ಮಾಡುವ ಮೂಲಕ ಏಷಿಯಾದ ಅನೇಕ ದೇಶಗಳಲ್ಲಿ ನಡೆಯುತ್ತಿರುವ ಮಹಿಳಾ ಚಳವಳಿಯಿಂದ ಬೆಂಬಲ ಪಡೆದು ಹೊಸ ಜಗತ್ತಿಗೆ ಎಚ್ಚರ ವಾಗಿದ್ದಾರೆ.

ಫಿಲಿಪೈನ್‌ನ ಲೋಲಾಗಳು, ತೈವಾನಿನ ಅಮಾಹ, ಕೊರಿಯಾದ ಹಮೋನಿಯರು ಮತ್ತು ಮಿಲಿಟರಿ ದಾಸ್ಯ ಪದ್ಧತಿಗೆ ಬಲಿಯಾದ ಡಚ್ ಮಹಿಳೆಯರು ತಮ್ಮ ಚೈತನ್ಯ, ಧೈರ್ಯಗಳನ್ನ ಕಂಡುಕೊಂಡು, ಜಪಾನಿನ ಸರ್ಕಾರದಿಂದ ನ್ಯಾಯ ಗಳಿಸಲು ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಮಹಿಳಾ ಚಳವಳಿಯಲ್ಲಿ ಭಾಗವಹಿಸುವ ಮೂಲಕ ಮತ್ತೆ ಜೀವನದ ಚೆಲುವನ್ನ ಕಂಡು ಕೊಂಡಿದ್ದಾರೆ.

ಕೃತಜ್ಞತೆಗಳು.

ಕೃಪೆ : **ಕತ್ತಲ ಕಾಲದ ಹಾಡು**
ಮಹಿಳಾ ಏಷಿಯನ್, ಮಾನವ ಹಕ್ಕುಗಳ ಪರಿಷತ್



## ಭೂಮಿ ಪೂಜೆ

ಇಲ್ಲೆ ಇಪ್ಪತ್ತು ಹೆಜ್ಜೆಯೊಳಗೆ
ಹೊಸ ಮನೆಗೆ ಭೂಮಿಪೂಜೆ, ಬಾವಿ ಕೊರೆಯುತ್ತಿದ್ದಾರೆ
ರಾತ್ರಿಯಾದರೂ ಆದೀತು ಅನ್ನುತ್ತಿದ್ದಾನೆ ಮೇಸ್ತ್ರಿ
ಈಗಿನ್ನು ಬೆಳಿಗ್ಗೆ ಏಳುಗಂಟೆ

ಅದೆಷ್ಟು ಜನ ಗಂಡಸರು
ಮೇಲೆ ಕೆಳಗೆ ಅಕ್ಕಪಕ್ಕ ಸುತ್ತಮುತ್ತ
ಇಳೆಗೆ ಇಳಿದೂ ಇಳಿದೂ
ಬಗೆದೂ ಬಗೆದೂ

ಥೂ ಪಾಪಿಷ್ಠರು
ಮಾತಾಡದಿದ್ದರೇನು ನೆಲ
ಇರದೆ ಲಜ್ಜೆ

ಹೇ ಮಣ್ಣೆ
ಶಪಿಸು ಕಟುವಾಗಿ ಉಶ್ಯಾಪರಹಿತ ಶಪಿಸು
ಮತ್ತೆ ಮುಟ್ಟದ ಹಾಗೆ ಮೈಯನ್ನು
ನನ್ನ ಪದ್ಯ ಕಾಪಾಡುವುದಿಲ್ಲ ನಿನ್ನನ್ನು ಮತ್ತು
ನನ್ನ ಸಾಕ್ಷಿ ಕೂಡಾ
ಶಪಿಸು ಕಟುವಾಗಿ ಶಪಿಸು, ಶಪಿಸು ಅವರನ್ನು ಶಪಿಸು

ಛೇ
ನೀರು ಕೊಟ್ಟೆಯಲ್ಲೆ!

– ಲಲಿತಾ ಸಿದ್ಧಬಸವಯ್ಯ

# ಗಾಯಿತ್ರಿ ದೇಸಾಯಿ: ಸರಕು ಸಂಸ್ಕೃತಿ

• ಪ್ರೊ. ಎಂ.ಎಚ್. ಕೃಷ್ಣಯ್ಯ


(ಚಿತ್ರ-೧)

ನಾವೀಗ ಜಾಗತೀಕರಣದ ತ್ರಿಶಂಕು ಸ್ಥಿತಿಯಲ್ಲಿದ್ದೇವೆ. ಇತ್ತ ದೇಶೀಯ ಸಂಸ್ಕೃತಿ, ಅಸ್ಮಿತೆ, ಅನನ್ಯತೆ ಎನ್ನುತ್ತಲೇ ಏಕತಾನದ, ಸಮೂಹ ಉತ್ಪಾದನೆಯ, ಜಾಗತಿಕ ಹೆಸರಿನ ವಿದೇಶೀ ವಸ್ತು, ಅನುಕರಣಗಳ ಮೋಹಜಾಲಕ್ಕೆ ಸಿಕ್ಕಿದ್ದೇವೆ. ಹಿಂದೆ ಅಲ್ಲೊಬ್ಬ ಇಲ್ಲೊಬ್ಬ ವ್ಯಕ್ತಿಯನ್ನು ಹೊಟ್ಟೆಬಾಕ ಎಂದು ಹಾಸ್ಯ ಮಾಡುತ್ತಿದ್ದುದುಂಟು. ಆದರೆ ಇಂದು ಸಾಮೂಹಿಕವಾಗಿ ಕೊಳ್ಳುಬಾಕರಾಗಿದ್ದೇವೆ. ತಾಳಿಕೆ, ಬಾಳಿಕೆಗಳ ಗುಣಮಟ್ಟ ಚಿಂತಿಸಿ, ಪರೀಕ್ಷಿಸಿ, ಉಪಯುಕ್ತತೆಯ ಮಾನದಂಡದಿಂದ ಸರಕು, ವಸ್ತುಪರಿಕರ ಕೊಳ್ಳುತ್ತಿದ್ದ ಜನತೆ ಬಳಸಿ ಎಸೆಯುವ ಗುಣಗಳಿಂದ ಮೋಹಿತರೂ ಭ್ರಮಿತರೂ ತಿಳಿಯುತ್ತಿಲ್ಲ. ದೇಶದ ಅರ್ಧಜನ ನರಳುತ್ತಿದ್ದರೂ ಮಧ್ಯಮವರ್ಗ ಶ್ರೀಮಂತವರ್ಗ ಭೋಗ ವಸ್ತುಪ್ರದರ್ಶನ ಸಂತೃಪ್ತಿಗೆ ವಶವಾಗುತ್ತಿದ್ದಾರೆ. ಈ ವಿಷಯದಲ್ಲಿ ಮಾತ್ರ ಒಂದು ಮಾಯಾ ಜಾಲ ಎಲ್ಲ ಸಮಾಜಗಳನ್ನೂ ಆವರಿಸಿದಂತೆ ಕಾಣುತ್ತಿದೆ. ಏಕೆಂದರೆ ಈ ಗೀಳು ಪ್ರಶಾಂತತೆಯ, ನೆಮ್ಮದಿಯ ಬೀಡಾಗ ಬೇಕಿದ್ದ, ಪರಿಸರ ಸೃಷ್ಟಿಸಬೇಕಿದ್ದ ಧಾರ್ಮಿಕ ಸ್ಥಳಗಳನ್ನೂ ಬಿಟ್ಟಿಲ್ಲ. ಅವೂ ಮಾರಾಟ ಮಾದರಿ ಶೈಲಿಗಳತ್ತ ವಾಲಿವೆ. ಈ ಹೊರ-ಒಳಗಗುಗಳ ದ್ವಂದ್ವ ಹಲವು ಕಲಾವಿದರನ್ನು ಕಾಡಿದೆ. ಕಳೆದ ಎರಡು ಮೂರು ವರ್ಷಗಳಿಂದ ಶ್ರೀಮತಿ ಗಾಯತ್ರಿ ದೇಸಾಯಿ ಅವರು ಕೊಳ್ಳುಬಾಕ ಸಂಸ್ಕೃತಿಯ ಗೀಳನ್ನು, ಅದರ ಪರಿಣಾಮಗಳನ್ನು, ಅದರಿಂದಾಗಿ ಏನೆಲ್ಲವುಗಳಿಂದ ವಂಚಿತರಾಗುತ್ತಿದ್ದೇವೆ ಎಂಬುದನ್ನು ತಮ್ಮ ರಚನೆಗಳ ವಿಷಯವಾಗಿಸಿ ಕೊಂಡು ವರ್ಣಚಿತ್ರಗಳನ್ನು ಸೃಜಿಸಿದ್ದಾರೆ, ಕಲಾ ಪ್ರದರ್ಶನಗಳನ್ನೂ ನಡೆಸಿದ್ದಾರೆ.

ಗಾಯಿತ್ರಿ ದೇಸಾಯಿಯವರು ಜನಿಸಿದ್ದು ಬಿಜಾಪುರದಲ್ಲಾದರೂ, ನೆಲೆಸಿರುವುದು ಧಾರವಾಡದಲ್ಲಿ. ಚಿತ್ರಕಲೆಯಲ್ಲಿ ಪದವೀಧರರಾದ ಅವರು ಧಾರವಾಡದ ಸ್ಕೂಲ್ ಆಫ್ ಆರ್ಟ್‌ನ ಪ್ರಿನ್ಸಿಪಾಲರಾಗಿದ್ದಾರೆ. ಅಧ್ಯಾಪನದ ಜೊತೆಗೆ ಕಲಾಸೃಷ್ಟಿ, ಕಲಾಚಟುವಟಿಕೆಗಳಲ್ಲೂ ತೊಡಗಿದ್ದಾರೆ. ಅವರು ಧಾರವಾಡದ ಕಲಾಮಂಡಲದ ಸಂಸ್ಥಾಪಕರಲ್ಲಿ ಒಬ್ಬರು. ಭಾರತದ ಬಹುಪಾಲು ಮುಖ್ಯ ನಗರಗಳಲ್ಲಿ ಹಾಗೂ ಜರ್ಮನಿಯಲ್ಲಿ ಏಕವ್ಯಕ್ತಿ ಕಲಾ ಪ್ರದರ್ಶನ ನಡೆಸಿದ್ದಾರೆ. ಸಮೂಹ ಕಲಾಪ್ರದರ್ಶಗಳಲ್ಲಿ, ಕಲಾಶಿಬಿರಗಳಲ್ಲಿ ಭಾಗವಹಿಸಿದ್ದಾರೆ. ಅವರ ಕೃತಿಗಳು ಭಾರತವಲ್ಲದೆ ಇಂಗ್ಲೆಂಡ್, ಜರ್ಮನಿ, ಹಾಲೆಂಡ್, ಫ್ರಾನ್ಸ್, ಅಮೆರಿಕಾ, ನ್ಯೂಜಿಲ್ಯಾಂಡ್‌ಗಳ ಖಾಸಗಿ ಸಂಗ್ರಹಾಲಯಗಳಲ್ಲಿವೆ. ಅನೇಕ ಸಂಘ ಸಂಸ್ಥೆ, ಅಕಾಡೆಮಿಗಳ ಗೌರವ ಪ್ರಶಸ್ತಿಗೆ ಪಾತ್ರರಾಗಿದ್ದಾರೆ.

೧೯೯೭ರಿಂದ ೨೦೦೦ದ ವರೆಗೆ 'ಮಹಿಳೆ ಮತ್ತು ನಾಗರಿಕತೆ' ಎಂಬ ಚಿತ್ರಸರಣಿ ರಚನೆ ಮಾಡಿ ಪ್ರದರ್ಶಿಸಿದ್ದರು. ೨೦೦೫-೦೬ರಲ್ಲಿ ಸರಕು, ಭೋಗ ಸಂಸ್ಕೃತಿಯ ದ್ವಂದ್ವಗಳತ್ತ ಹೊರಳಿದ್ದಾರೆ. ಅವರ 'ನೀಲನರಿ' ಚಿತ್ರವು ಪ್ರಸಿದ್ಧ, ಜನಪ್ರಿಯ. ಆದರೂ ಈ ಸರಣಿ ಚಿತ್ರಗಳಲ್ಲಿ ಯಾವುದೇ ಒಂದು ಚಿತ್ರ ಮುಖ್ಯವಾಗುವುದಿಲ್ಲ. ಹಲವು ಚಿತ್ರಗಳ ಸಮಗ್ರ ದೃಷ್ಟಿ ಮುಖ್ಯವಾಗಿ, ಅನುಭವ ಚಿಂತನೆ ಸಂವೇದನೆಗಳು ಪರಸ್ಪರ ಸೂಚಕಗಳಾಗುತ್ತವೆ. ಆ ಕಾರಣವೇ ಎಷ್ಟೋ ಚಿತ್ರಗಳಿಗೆ ಶೀರ್ಷಿಕೆಗಳೂ ಇರುವುದಿಲ್ಲ. ಪ್ರವಾಹ ಸದೃಶ ಸಂವೇದನೆಗಳಿಗೆ ನಿರ್ದಿಷ್ಟ ಚೌಕಟ್ಟು ಸಾಧ್ಯವಿಲ್ಲ ಎನಿಸುತ್ತದೆ. ಕೆಲವು ಚಿತ್ರಗಳ ವಿವರಣೆ ಮುಂದೆ ನೀಡಿದೆ.

ಒಂದು ಕಾಲಕ್ಕೆ ಕಪ್ಪು ಕನ್ನಡಕ ಬಿಸಿಲು ತಡೆಯಲು ಅನುಕೂಲ ಎನಿಸಿತ್ತು. ಈಗ ಅದು ಒಂದು ಫ್ಯಾಷನ್ ಆಗಿದೆ. ಅದೇ ಒಂದು ಸಂಕೇತವಾಗಿ ಒಳ ಹೊರಗುಗಳು ತೆರೆದುಕೊಳ್ಳಲು ಸಾಧ್ಯ. ಒಂದು ಚಿತ್ರದಲ್ಲಿ (ಚಿತ್ರ-೧) ಕಪ್ಪು ಕನ್ನಡಕದ ಸಮೀಪ ದೃಶ್ಯವಿದೆ. ಹಿನ್ನೆಲೆಯ ಕೆಳ ಅರ್ಧದಲ್ಲಿ ಅಡ್ಡಡ್ಡ ಗಾಢ ಗೆರೆಗಳಿದ್ದರೆ, ಮೇಲರ್ಧ ಕೇಸರಿ-ತಿಳಿಕೆಂಪಿನ ಬಣ್ಣದ ತಲವಿದೆ. ಚಿತ್ರದ ಮುಖ್ಯಭಾಗ ನಡುವೆ ಮುನ್ನೆಲೆಯಲ್ಲಿ ಕಪ್ಪು ಕನ್ನಡಕ. ಕನ್ನಡಕದ ಗಾಜಿನಲ್ಲಿ ಪ್ರತಿಫಲನವಾದಂತೆ ಹಲವು ಬಿಂಬ (ಇಮೇಜಸ್)ಗಳಿವೆ. ಮುಖ್ಯವಾಗಿ ಫ್ಯಾಷನ್‌ನ ರೂಪಿಕೆಗಳು (ಮೋಟಿಫ್ಸ್). ವ್ಯಾನಿಟಿಬ್ಯಾಗ್, ಅರಳಿದ ಸೂರ್ಯಕಾಂತಿ, ಒಂದು


(ಚಿತ್ರ-೨)








ಶಿರ, ಕೆಂಪು ಕಾಂಡರೆಂಬೆಗಳು ಮೆದುಳನ್ನೆ ಹಿಡಿದ ಬಿಂಬ, ಲಿಪ್‌ಸ್ಟಿಕ್, ಎಡಗಡೆ ಅರಳಿದ ತೆಳುಕೆಂಪು ಪುಷ್ಪ, ಎಡತುದಿಯಲ್ಲಿ ವಿಮಾನ, ಪೈನ್‌ಗ್ಲಾಸ್, ಒಂದೆಡೆ ಹೂಜಿಯಿಂದ ಸುರಿದಂತೆ ಸೀರೆಯ ಹರವು, ಅಲ್ಲಲ್ಲಿ ಹಳದಿ ನಕ್ಷತ್ರಗಳು. ಬಹುಶಃ ಹೆಣ್ಣಿನಲ್ಲಾಗಿರುವ ಬದಲಾವಣೆಗಳನ್ನೇ, ಫ್ಯಾಷನ್, ತಾವೂ ತಾರೆಗಳಂತಾಗುವ ಅದಮ್ಯ ಬಯಕೆಗಳ ಸೂಚನೆಯಾಗುತ್ತವೆ. ಬಣ್ಣಗಳಲ್ಲೂ ಸೂಚ್ಯಾರ್ಥ ಸಾಧ್ಯವಾಗುತ್ತವೆ.

ಇನ್ನೊಂದು ಚಿತ್ರದಲ್ಲಿ (ಚಿತ್ರ–೨) ಚೌಕಾಕಾರ ಲಂಬವಾಗಿ ವಿಭಜಿತವಾಗಿದೆ. ಬಲ ಪಾರ್ಶ್ವದಲ್ಲಿ ಮೇಲಿನಿಂದ ಕೆಳಕ್ಕೆ ಮೈವಳಿಕೆಯ ಹಿನ್ನೆಲೆಯಲ್ಲಿ ವಿವಿಧ ಬಣ್ಣದ ಬಗೆ ಬಗೆ ಮಾದರಿಯ ಕಾರುಗಳು. ನಾವು ಅಂಬಾಸಡರ್ ಸರ್ವಸ್ವವಾಗಿದ್ದ ಕಾಲದಿಂದ ಬಹುದೂರ ಸಾಗಿ ಬಂದಿದ್ದೇವೆ. ಎಡಭಾಗದಲ್ಲಿ ಹಸಿರು ಮತ್ತು ಹಣ್ಣಾದ ಕೆಂಪು ಮಿಶ್ರಿತ ಎಲೆಗಳು, ದ್ರಾಕ್ಷಿಗೊಂಚಲು. ನಾಲ್ಕು ಕೋಲಾ ಬಾಟಲಿಗಳು ವೈದೃಶ್ಯ ನೀಡುತ್ತವೆ. ಕೆಳಭಾಗದಲ್ಲೊಂದು ವ್ಯಕ್ತಿಯ ಆಕೃತಿ, ಆದರೆ ನಾಯಿಯದೊ ನರಿಯದೊ ತಲೆ, ಆಕೃತಿಗೆ ನೀಲಬಣ್ಣದ ಉಡುಪು. ನರಿರೂಪಿಕೆ ಗಾಯಿತ್ರಿಯವರ ಚಿತ್ರಗಳಲ್ಲಿ ಅರ್ಥವತ್ತಾಗಿ ಆಗಾಗ್ಗೆ ಬರುತ್ತವೆ. ಎಡ ಮೇಲು ಭಾಗದಲ್ಲಿ ಮಾರಾಟ ಬಿಲ್ಲಗಳ ಬಾರ್‌ಕೋಡ್ ಇದೆ. ಹಿನ್ನೆಲೆಯಲ್ಲಿ ಅಸ್ಪಷ್ಟವಾಗಿ ಬಹು ಮಹಡಿ ಕಟ್ಟಡಗಳ ಬ್ಲಾಕ್‌ಗಳು. ಇದೇನು ನೋಡು ಎಂಬಂತಹ ಕೈಸನ್ನೆಯೂ ಇದೆ. ಈ ಬಿಂಬಗಳು ಸಂಯೋಜನೆಗೊಂಡು ಒಟ್ಟು ಸರಕು ಸಂಸ್ಕೃತಿಯ ಮತ್ತು ನಿಸರ್ಗ ಸಹಜತೆಯ ವೈದೃಶ್ಯ ಮೂಡಿಸುತ್ತವೆ.

ಸರಕು ಸಂಸ್ಕೃತಿ ಎಂದಾಗ ಜಾಹಿರಾತುಗಳದೆ ಕಾರುಬಾರು, ಥಳುಕು ಆಕರ್ಷಣೆಗೇ ಬೆಲೆ. ಇನ್ನೊಂದು ಚಿತ್ರದಲ್ಲಿ (ಚಿತ್ರ–೩) ಇಂತಹ ಚಿಂತನೆಗಳೇ ರೂಪತಳೆಯುತ್ತವೆ. ಹಸಿರು, ಕೆಂಪು, ಬಿಳಿ ರೂಪಿಕೆಗಳು, ಬಾಟಲಿಗಳು, ಜಾಹಿರಾತಿನ ಚುಟುಕಾದ ಗಮನ ಸೆಳೆಯುವ ಪ್ರಚಾರವಾಕ್ಯಗಳು. ಕ್ಯಾಪ್ಸೂಲ್‌ಗಳು, ಕೆಂಪುಚೀಲಗಳು ಅಲ್ಲಲ್ಲಿ ವಾಕ್ಯಗಳು. Red Bull gives you wings, Inspired morality, Improves reaction speed, Improves performance, You either have it or you dont. ವೈಯಾಗ್ರ ಕಾಲದಲ್ಲಿ ಜಾಹಿರಾತಿನ ಮಾತುಗಳ ಸೆಳೆತ ಹೇಳಬೇಕಿಲ್ಲ. ಪಠ್ಯವೂ ಚಿತ್ರದ ಅವಿನಾಭಾಗವಾಗುತ್ತದೆ.

ಗಾಯಿತ್ರಿ ದೇಸಾಯಿಯವರಿಗೆ ಬಹು ಪ್ರಿಯವಾದ, ಸಂಯೋಜನೆ ಚಿತ್ರಕ ದೃಷ್ಟಿಯಿಂದಲೂ ಅರ್ಥವತ್ತಾಗುವ ನಿಸರ್ಗ ವಿವರಗಳು ವೈದೃಶ್ಯವಾಗಿ ಆಧುನಿಕ ಕಾಲದ ಸ್ಥಿತ್ಯಂತರವನ್ನು ಸೂಚಿಸುತ್ತವೆ (ಚಿತ್ರ–೪). ಬಿಳಿ, ಎಲೆಗಳ ಹಾಸುಹೊಕ್ಕಿನಲ್ಲಿ (ಇವು ಆಲಂಕಾರಿಕವೂ ಆಗುತ್ತವೆ) ಕೆಂಪು ಫ್ರೇಮ್‌ಗಳು. ಒಂದರಲ್ಲಿ ವಿಮಾನ ತೂರುತ್ತಿದೆ. ಎರಡು ಕೆಂಪು ಹಕ್ಕಿಗಳು, ಇತರೆ ಹಾರಾಡುವ ವಿಮಾನಗಳು (ಸಂಬಂಧ ಅರ್ಥವತ್ತಾಗಿದೆ). ಒಂದು ಚೌಕಟ್ಟಿನ ಕೆಳ ಪಟ್ಟಿ ಮೇಲೆ ಇದೆ, ನಡುವೆ ಅಡ್ಡಡ್ಡವಾಗಿ ಅಲೆಗಳು (ಸಮುದ್ರವೇ). ಅಲ್ಲಲ್ಲಿ ಹೂವಿನ ಅರಳಿದ ದಳಗಳ ಅಭಿರಚನೆ(ಪ್ಯಾಟರ್ನ್). ಕೆಲವು ಚೌಕಟ್ಟುಗಳಲ್ಲಿ ವ್ಯಕ್ತಿಗಳ ಪಾರ್ಶ್ವ ನೆರಳು ನೋಟಗಳು. ಒಂದು ಚೌಕಟ್ಟಿನಲ್ಲಿ ಬೆಕ್ಕು, ನೀಲ ಮುಖಿ. ಸ್ಥಿತ್ಯಂತರದ ದ್ವಂದ್ವ ಸ್ಪಷ್ಟ.

ಇನ್ನೊಂದು ಚಿತ್ರ ಗಮನಿಸಿ (ಚಿತ್ರ–೫). ಚೌಕಾಕಾರದಲ್ಲಿ ಅಡ್ಡಡ್ಡವಾಗಿ ಮೂರು ತಲಗಳಿವೆ. ಮಧ್ಯದ ದೀರ್ಘಚೌಕಾಕಾರದಲ್ಲಿ ಕಾರುಗಳು ಕಿಕ್ಕಿರಿದು ಸಾಗುತ್ತಿವೆ. ಅಲ್ಲೊಂದು ಪುಕ್ಕ ಮೇಲೆತ್ತಿದ ಹಕ್ಕಿಯ ಬಿಂಬ ಓವರ್‌ಲ್ಯಾಪ್ ಆಗಿದೆ. ಕೆಂಪು ಹಿನ್ನೆಲೆಯ ಮೇಲಿನ ತಲದಲ್ಲಿ ನೀಲ ಭೂಖಂಡಗಳ ಚಪ್ಪಟೆ ಭೂಪಟ ಜಾಗತೀಕರಣದ ಸೂಚಕ ಸಂಜ್ಞೆಯೆಂಬಂತಿದೆ, ನಡುವೆ ಮುಖಾಮುಖಿಯಾದ ಎರಡು ನೆರಳ ಶಿರಗಳು, ಹಾಗೇ ಎಡ–ಬಲ ತುದಿಗಳಲ್ಲಿ ವಿಮುಖವಾಗಿರುವ ನೆರಳ ಶಿರಗಳು. ಏನೆಲ್ಲ ಅರ್ಥ ಸಾಧ್ಯ ಎನಿಸುತ್ತದೆ. ಕೆಳತಲದಲ್ಲಿ ಹಸಿರು ಎಲೆಗಳು, ಒಂದು ಹೂ, ಬಿಳಿ ಹಿನ್ನೆಲೆಯಲ್ಲಿ

ಒಂದು ಹಕ್ಕಿ. ಕೆಳಗೂ ಸಹ ಕೆಂಪು ಹಿನ್ನೆಲೆಯಲ್ಲಿ ಅಡ್ಡಡ್ಡವಾಗಿ ಸಾಗುತ್ತಿರುವ ಕಾರುಗಳು. ಕೆಂಪು ಬಣ್ಣಕ್ಕೆ ಹಲವು ಭಾವ, ಭಾವನೆ, ಅನುಭೂತಿಗಳ ಚೋದನಶಕ್ತಿಯಿದೆ.

ಇನ್ನೆರಡು ಚಿತ್ರಗಳು (ಚಿತ್ರ-೬) ಬಾಟಲಿಗಳ ಬಿಂಬಗಳಿಂದ ಅರ್ಥವತ್ತಾಗುತ್ತವೆ. ಒಂದರಲ್ಲಿ, ಬಾಟಲಿಯಲ್ಲಿ ಹೆಣ್ಣು, ಬಾಟಲಿಯ ಮೇಲೆ ತಿಳಿ ಬಣ್ಣದ ಗುಲಾಬಿಗಳು–Fresh and Active ಎಂಬ ಬರೆಹ. ಇನ್ನೊಂದರಲ್ಲಿ, ಚಿಕ್ಕಚಿಕ್ಕ ಹೂಜಿಯಂತಹ ಬಾಟಲಿಗಳು, ಎಲೆಹೂಗಳು, ಹೂಗಳ ನಡುವೆ ವೈನ್ ಗ್ಲಾಸುಗಳು ಅರ್ಧ ಕೆಳ ಅಂಚಿನಲ್ಲಿ Joy ಎಂದಿದೆ. ಹಿನ್ನೆಲೆಯ ಮೈವಳಿಕೆಯಿಂದ ಬಾಟಲಿಗಳು ಎದ್ದು ಕಾಣುತ್ತವೆ. ಮಹಿಳೆಯ ಸ್ಥಿತ್ಯಂತರದತ್ತಲೆ ಪ್ರಧಾನವಾಗಿ ಮನಸ್ಸು ಹರಿಯುತ್ತದೆ.

ಗಾಯಿತ್ರಿ ದೇಸಾಯಿಯವರ 'ನೀಲನರಿ' (ಚಿತ್ರ-೭) ಹಲವು ದೃಷ್ಟಿಯಿಂದ ಗಮನ ಸೆಳೆಯುತ್ತದೆ. ಅದರ ಬಗ್ಗೆ ಧಾರವಾಡದ ಆರ್ಯ ಆಚಾರ್ಯ ಅವರು ದೀರ್ಘ ಲೇಖನವನ್ನೇ ಬರೆದು ರೇಖೆ, ಬಣ್ಣ, ಸಂಯೋಜನೆ, ರೂಪಿಕೆಗಳನ್ನೆಲ್ಲ ವಿವರಿಸಿದ್ದಾರೆ. ಶೈಲಿ, ತಂತ್ರಗಳಷ್ಟೇ ವಿಷಯವೂ ಗಮನ ಸೆಳೆದು ಕಾಡುತ್ತದೆ. ಚಿತ್ರರಚನೆಗೆ ಪ್ರೇರಣೆ ಪಂಚತಂತ್ರದ ಒಂದು ಕಥೆ. ಕಾಡಿನ ನರಿ ನಗರಕ್ಕೆ ಬಂದು ಅಪಹಾಸ್ಯಕ್ಕೆ ಒಳಗಾಗುತ್ತದೆ. ನೀಲಿ ಬಣ್ಣ ಸುರಿದು ಬಿಳಿನರಿಯನ್ನು ವಿರೂಪಗೊಳಿಸುತ್ತಾರೆ, ನಗರದವರು. ನರಿ ಕಾಡಿಗೆ ಹಿಂದಿರುಗಿ ನೀಲಿ ಬಣ್ಣವನ್ನು ತನ್ನ ವೈಭವ, ಜಂಬ ಪ್ರದರ್ಶನಕ್ಕೆ ಬಳಸಿಕೊಂಡು ಅಲ್ಲೂ ನಗೆಪಾಟಲಿಗೆ ಈಡಾಗುತ್ತದೆ. ಇಲ್ಲಿ ಐಡಿಯಾಲಜಿಗಳ ಹಠಮಾರಿತನ, ತನ್ನ ರೀತಿಯನ್ನು ಜೊತೆಯವರ ಮೇಲೆ ಹೇರುವ ಪ್ರಯತ್ನ ಇದೆ ಎನ್ನುತ್ತಾರೆ ಆರ್ಯ ಅವರು. ಜಾಗತೀಕರಣ, ಆಧುನಿಕತೆಗಳಿಂದ ನಾಗರಿಕತೆಗೆ ಆಗುತ್ತಿರುವ ಧಕ್ಕೆಯೂ ಸೂಚಿತ. ಹಾಗೇ ಎಚ್ಚರಿಕೆಯನ್ನೂ ನೀಡುತ್ತಾರೆ ಆರ್ಯ ಅವರು. ಆಧುನಿಕತೆಯನ್ನು ಸಾರಾಸಗಟಾಗಿ ನಿರಾಕರಿಸಬೇಕಿಲ್ಲ, ವಿಮರ್ಶೆಗೆ ಒಳಪಡಿಸಬೇಕು ಎಂದು. ಇವೆಲ್ಲ ಸರಿ, ಪ್ರಶ್ನೆಯೆಂದರೆ ಪಂಚತಂತ್ರದ ಕಥೆ ಪ್ರೇರಣೆ ಎಂಬುದನ್ನು 'ನೀಲನರಿ' ಶೀರ್ಷಿಕೆಯಿಂದ ಮಾತ್ರ ಗ್ರಹಿಸಲು ಸಾಧ್ಯ. ಆದರೆ ಗಾಯಿತ್ರಿಯವರ ಹಲವು ಚಿತ್ರಗಳು ಒಳಗಿನ ಬಿಂಬ, ರೂಪಿಕೆ, ಸಂಯೋಜನೆ, ವೈದೃಶ್ಯಗಳಿಂದಲೇ ಹೇಳಬಲ್ಲುವು. ಪಂಚತಂತ್ರ






ಕಥೆಯನ್ನು ಓದದಿದ್ದರೂ ನೆನಪಿಸುತ್ತದೆಯೇ ಎಂಬುದು ಸಂದೇಹ. ಅಲ್ಲದೇ ಆರ್ಯ ಅವರು "ಅದರಲ್ಲಿ ಸೋಲುವ ನೀಲವ್ಯಕ್ತಿ ಗಂಡಾಗಿದೆ, ಹೆಣ್ಣಲ್ಲ. ಹೆಣ್ಣು, ಜೀವನ ಪರಂಪರೆ ಪರಿಸರ ಮೌಲ್ಯಗಳ ಕುರಿತು ಹೆಚ್ಚು ಸಂವೇದನಾಶೀಲ ವ್ಯಕ್ತಿ ಆಗಿರುತ್ತಾಳೆ. ನಮ್ಮ ದೇಶದಲ್ಲಂತೂ ಅದು ವಿದಿತ" ಎನ್ನುತ್ತಾರೆ. ಆಕೃತಿ ಗಂಡು ಎಂದ ಮಾತ್ರಕ್ಕೆ ಚಿತ್ರದೊಳಗಿನಿಂದಲೇ ಈ ಎಲ್ಲ ಅರ್ಥ ವಿಸ್ತರಣೆ ಸಾಧ್ಯವೇ ಎನಿಸುತ್ತದೆ. ಏನೇ ಇದ್ದರೂ ಚಿತ್ರ ಸರಳ, ಸುಂದರವಾಗಿದೆ. ಅಡ್ಡಡ್ಡ ಮೂರು ಕೆಂಪಿನ ವರ್ಣ ಛಾಯಾಂತರದ ತಲಗಳಿವೆ. ಅದರ ಎಡಕ್ಕೆ ಹಳದಿ ಬಣ್ಣದಲ್ಲಿ ಬೆಳಗುತ್ತಿರುವ ವಿದ್ಯುತ್ ಬಲ್ಬು, ಪುಟ್ಟ ಕಾರುಗಳು. ಬಲಕ್ಕೆ (ಆಕೃತಿಯ) ಗಣಕದ ಮೌಸ್‌ಗಳಿವೆ. ಮಧ್ಯದ ತಲ ಬಳ್ಳಿ ವಿನ್ಯಾಸ, ಹಕ್ಕಿಗಳಿಂದ ಕೂಡಿದೆ. ಹಳದಿ ನಸುಗೆಂಪು ಮಿಶ್ರಿತ ಹಿನ್ನೆಲೆಯಲ್ಲಿ ಕೆಳಗೂ ವರ್ಣ ವೈದೃಶ್ಯ ಮೂಡಿಸುವ ಬಳ್ಳಿ ವಿನ್ಯಾಸ, ಹೂವು, ಹಕ್ಕಿಗಳು. ಗಮನ ಸೆಳೆಯುವ ಅರ್ಥಪೂರ್ಣ ಭಾಗವೆಂದರೆ, ಕೆಳಗಿನಿಂದ ಎರಡನೆ ತಲದ ಮೇಲಂಚಿನವರೆಗೆ ಹೈವೇ–ನಡುವಿನ ವಿಭಜನೆ ಸೂಚಕ ಸೇರಿದಂತೆ–ಅಲ್ಲಿ ಕಾರುಗಳ ಓಡಾಟ–ಅದುಮೂರನೆ ತಲದಲ್ಲಿ ಬಾಗಿ ಬಲ ಅಂಚಿನಲ್ಲಿ ಸೇರಿಹೋಗುತ್ತದೆ. ಬಳ್ಳಿ ವಿನ್ಯಾಸದ ನಡುವೆ ಸೀಳಿ ತೂರಿ ಸಾಗುವ ಸಂಯೋಜನೆ ಆಧುನಿಕತೆಯನ್ನು ಸೂಚಿಸುತ್ತದೆ. ಅನಾಹುತಗಳನ್ನು ಸೂಚಿಸುತ್ತಲೆ, ವಿದ್ಯುನ್ಮಾನ ಯುಗ ಎತ್ತ ಸಾಗುತ್ತಿದೆ ಎಂಬ ಪ್ರಶ್ನೆಯೂ ಕಾಡುತ್ತದೆ.

ಗಾಯಿತ್ರಿ ದೇಸಾಯಿಯವರು ಸರಳತೆ, ಕನಿಷ್ಠ ಸೂಚಕಗಳು, ಅಚ್ಚುಕಟ್ಟಾದ ಸಂಯೋಜನೆಯಿಂದಲೆ ಬಹಳಷ್ಟು ವ್ಯಕ್ತಪಡಿಸಬಲ್ಲರು. ತಮ್ಮದೇ ಆಲಂಕಾರಿಕ ವಿನ್ಯಾಸದ ಶೈಲಿಯನ್ನು ಬಳಸುತ್ತಲೇ ಆಧುನಿಕ ಕಾಲದ ದ್ವಂದ್ವಗಳತ್ತ ಬೆರಳು ತೋರಬಲ್ಲ ಪ್ರತಿಭಾವಂತ ಕಲಾವಿದೆಯಾಗಿದ್ದಾರೆ. ❑

# ಲಿಂಗತ್ವ (ಜೆಂಡರ್) ಎಂದರೇನು?

ಇಂಗ್ಲಿಷ್ ಮೂಲ :
ಅಂಡರ್‌ಸ್ಟ್ಯಾಂಡಿಂಗ್ ಜೆಂಡರ್

ಲೇಖಕರು : ಕಮಲಾ ಭಾಸಿನ್
ಕನ್ನಡಕ್ಕೆ : ವೆಂ. ವನಜ

*(ಡಿಸೆಂಬರ್ ಸಂಚಿಕೆಯಿಂದ ಮುಂದುವರಿದಿದೆ)*

ಜೋನ್ ಕೆಲ್ಲಿಯವರ ಪ್ರಕಾರ, 'ಕೌಟುಂಬಿಕ' ಮತ್ತು 'ಸಾರ್ವಜನಿಕ' ಎನ್ನುವುದು ಸಂಸ್ಕೃತಿಯಿಂದ ಸಂಸ್ಕೃತಿಗೆ ಬೇರೆಯೇ ಆಗಿದ್ದರೂ, ಇವುಗಳನ್ನು ಪ್ರತ್ಯೇಕಿಸುವ ಗೆರೆಗಳನ್ನು ಬೇರೆ-ಬೇರೆಯಾಗಿಯೇ ಎಳೆದರೂ, ಸಮಾಜಗಳನ್ನು ಒಂದು ತಕ್ಕಡಿಯಲ್ಲಿಟ್ಟು ನೋಡಿದಾಗ ಸಮನ್ವಯ ಹೊಂದಿರುವ ಮಾದರಿಯೊಂದು ಹುಟ್ಟಿಕೊಳ್ಳುತ್ತದೆ. ಒಂದು ತುದಿಯಲ್ಲಿ ಕೌಟುಂಬಿಕ ಮತ್ತು ಸಾರ್ವಜನಿಕ ಕಾರ್ಯಚಟುವಟಿಕೆಗಳು ಸಾಧಾರಣವಾಗಿ ಒಂದಕ್ಕೊಂದು ಹೊಂದಿಕೊಂಡಿದ್ದರೆ, ಇನ್ನೊಂದು ತುದಿಯಲ್ಲಿ ಅವು ತೀಕ್ಷ್ಣವಾಗಿ ಪ್ರತ್ಯೇಕಗೊಂಡಿವೆ. ಕೌಟುಂಬಿಕ ಚಟುವಟಿಕೆಗಳು ಸಾರ್ವಜನಿಕ ಅಥವಾ ಸಾಮಾಜಿಕ ಚಟುವಟಿಕೆಗಳೊಂದಿಗೆ ಸಾಮರಸ್ಯ ಹೊಂದಿದ್ದಾಗ ಮಹಿಳೆಯರ ಸ್ಥಾನಮಾನಗಳು ಪುರುಷರ ಸ್ಥಾನಮಾನದೊಂದಿಗೆ ಹೋಲಿಸುವಂತಿರುತ್ತವೆ ಅಥವಾ ಅವರದಕ್ಕಿಂತ ಉನ್ನತವಾದದ್ದಾಗಿರುತ್ತವೆ. ಈ ಮಾದರಿಯು ಏಂಜೆಲ್ಸ್‌ರವರ ಚಿಂತನೆಗಳೊಂದಿಗೆ ಹೆಚ್ಚಾಗಿ ಹೊಂದಿಕೊಳ್ಳುತ್ತದೆ. ಕಾರಣ, ಅಂಥ ಸಂದರ್ಭಗಳಲ್ಲಿ ಜೀವನೋಪಾಯ ಮತ್ತು ಉತ್ಪಾದನೆಯ ಸಾಧನಗಳನ್ನು ಇಬ್ಬರೂ ಸಮಾನವಾಗಿ ಹಂಚಿಕೊಂಡಿರುತ್ತಾರೆ. ಅಲ್ಲದೆ, ಸಾಮುದಾಯಿಕ ಕುಟುಂಬವು ಕೌಟುಂಬಿಕ ಮತ್ತು ಸಾಮಾಜಿಕ ಬದುಕಿನ ಕೇಂದ್ರಬಿಂದುವಾಗಿದೆ. ವಿನಿಮಯೋದ್ದೇಶಿತ ಉತ್ಪಾದನೆ ಅತ್ಯಲ್ಪವಿರುವ, ಖಾಸಗಿ ಆಸ್ತಿ ಮತ್ತು ವರ್ಗ ಅಸಮಾನತೆಗಳು ಬೆಳೆದಿಲ್ಲದ ಸಮಾಜಗಳಲ್ಲಿ ಲಿಂಗ ಅಸಮಾನತೆಗಳು ಹೆಚ್ಚಾಗಿ ಕಾಣುವುದಿಲ್ಲ. ಇಂದಿಗೂ ಮಹಿಳೆಯರು ಉತ್ಪಾದನೆಯ ಎಲ್ಲಾ ಮಟ್ಟಗಳಲ್ಲಿ ಕ್ರಿಯಾಶೀಲ ಉತ್ಪಾದಕರಾಗಿ ಮುಂದುವರಿಯುತ್ತಿದ್ದಾರೆ. ಆದರೆ ಉಳಿತಾಯ ಹೆಚ್ಚಿದಂತೆ, ಖಾಸಗಿ ಆಸ್ತಿ ಬೆಳೆದಂತೆ ಸಮುದಾಯ ಕುಟುಂಬವು ಒಂದು ಖಾಸಗಿಯಾದ ಆರ್ಥಿಕ ಘಟಕವಾದಂತೆ ಅದನ್ನು (ವಿಸ್ತರಣೆಗೊಂಡ ಅಥವಾ ಚಿಕ್ಕ ಕುಟುಂಬ) ಪುರುಷ ಪ್ರತಿನಿಧಿಸಿದಂತೆ, ಮಹಿಳೆಯರು ಕ್ರಮೇಣ ಆಸ್ತಿ, ಉತ್ಪನ್ನಗಳು ಮಾತ್ರವಲ್ಲ, ತಮ್ಮ ಮೇಲಿನ ನಿಯಂತ್ರಣವನ್ನೂ ಕಳೆದುಕೊಳ್ಳುತ್ತಾರೆ. ಪರಿಣಾಮವಾಗಿ, ಮಹಿಳೆಯರ ಕಾರ್ಯಚಟುವಟಿಕೆಗಳ ವಲಯವಾದ ಕುಟುಂಬವೆ ಪುರುಷರ ಆಳ್ವಿಕೆ ಹೊಂದಿರುವ ವ್ಯಾಪಕವಾದ ಸಾಮಾಜಿಕ ಮತ್ತು ರಾಜಕೀಯ ವ್ಯವಸ್ಥೆಗೆ ಅಧೀನವಾಗಿಬಿಡುತ್ತದೆ. ಇದು ಚಾರಿತ್ರಿಕ ಅಥವಾ ನಾಗರಿಕ ಸಮಾಜಗಳ ಒಂದು ಸಾಮಾನ್ಯ ಮಾದರಿಯಾಗಿದೆ. (ಜೋನ್‌ಕೆಲ್ಲಿ: ವಿಮೆನ್, ಹಿಸ್ಟರಿ ಅಂಡ್ ಥಿಯರಿ: ೧೯೮೪: ಪುಟ: ೧೦-೧೧).

**ಈ ಖಾಸಗಿ ಮತ್ತು ಸಾರ್ವಜನಿಕಗಳ ನಡುವಿನ ಪ್ರತ್ಯೇಕತೆಯು ಕುಟುಂಬದೊಳಗಾಗುವುದನ್ನು ಮರೆಮಾಚುತ್ತದೆಯೆ? ಅದರೊಂದಿಗೆ, ಕುಟುಂಬದೊಳಗಿನ ಅಸಮಾನತೆಗಳು ಮತ್ತು ಸಂಘರ್ಷಗಳಿಗೆ ಸವಾಲೊಡ್ಡುವುದನ್ನು ಕಷ್ಟಕರವಾದುದನ್ನಾಗಿ ಮಾಡುತ್ತದೆಯೆ?**

ಖಂಡಿತವಾಗಿಯೂ ವಾಸ್ತವದಲ್ಲಿ ಪ್ರಭುತ್ವಕ್ಕೆ 'ಖಾಸಗಿ' ಕ್ಷೇತ್ರಕ್ಕೆ ತಲೆಹಾಕುವ ಅಧಿಕಾರವಿರಕೂಡದೆಂದು ಹಲವು ರಾಜಕೀಯ ಚಿಂತಕರು ವಾದಿಸುತ್ತಾ ಬಂದಿದ್ದಾರೆ. ಮನೆ ಮತ್ತು ಕುಟುಂಬದ ಸದಸ್ಯರ ನಡುವಿನ ಸಂಬಂಧಗಳು ಸರಕಾರೀ ನಿಯಂತ್ರಣದಿಂದ ಹೊರತಾಗಿರಬೇಕೆಂದು ವಾದಿಸಲಾಗಿದೆ. ಮನೆಯ ನಾಲ್ಕು ಗೋಡೆಗಳೊಳಗೆ ನಡೆಯುವ ಪ್ರತಿಯೊಂದೂ ಖಾಸಗಿ ವಿಷಯವಾಗಿ ಪರಿಗಣಿತವಾಗುತ್ತದೆ. ಯಾವುದೇ ಮಧ್ಯ ಪ್ರವೇಶಿಕೆಗೆ ಪ್ರೋತ್ಸಾಹವಿರುವುದಿಲ್ಲ. ಕಣ್ಣಿಗೆ ರಾಚುವ ಅಸಮಾನತೆಗಳು ಮತ್ತು ಮಹಿಳೆಯರ ಮೇಲೆ ಗುರುತರವಾದ ಆಕ್ರಮಣಗಳು ಮುಂದುವರಿಯಲು ಬಿಡಲಾಗಿದೆ. ಹೆಂಡತಿಯನ್ನು ಹೊಡೆಯುವುದು, ವೈವಾಹಿಕ ಅತ್ಯಾಚಾರ, ತಂದೆ ಅಥವಾ ಇತರ ಸಂಬಂಧಿಗಳಿಂದ ಹೆಣ್ಣುಮಕ್ಕಳ ಮಾನಸಿಕ ಮತ್ತು ದೈಹಿಕ ಹಿಂಸೆ ಮತ್ತು ವಂಚನೆ ಮುಂತಾದವು ಇತ್ತೀಚಿನವರೆಗೂ ಅಗೋಚರವಾದ, ಚರ್ಚಿತವಾಗದ ಮತ್ತು ಪ್ರಶ್ನಾತೀತವಾದ ವಿಷಯಗಳಾಗಿದ್ದವು.

ಕೌಟುಂಬಿಕ ಮತ್ತು ಸಾರ್ವಜನಿಕಗಳ ನಡುವಿನ ವಿಭಜನೆಯು ಮನೆಯ ಹೊರಗೆ ದುಡಿಯುವ ಮಹಿಳೆಯರಿಗೆ ಸಮಸ್ಯೆಗಳನ್ನು ಸೃಷ್ಟಿಸುತ್ತದೆ. ಉದ್ಯೋಗಗಳು ಅವರಿಂದ ಸ್ವಾತಂತ್ರ್ಯ, ಚಲನಶೀಲತೆ, ಸ್ಪರ್ಧಾತ್ಮಕತೆ ಮತ್ತು ದೀರ್ಘಾವಧಿಯ ದುಡಿತಗಳನ್ನು ನಿರೀಕ್ಷಿಸುತ್ತವೆ. ಇದಕ್ಕೆ ವಿರುದ್ಧವಾಗಿ ಕುಟುಂಬವು ಅವರಿಂದ ಉಪಯುಕ್ತ ದುಡಿಮೆ, ಸೇವೆ ಮತ್ತು ಸಹಕಾರಗಳನ್ನು ನಿರೀಕ್ಷಿಸುತ್ತದೆ. ಹೆಚ್ಚುಕಡಿಮೆ ರಾಜಿಗೆ ಮೀರಿದ ಬೇಡಿಕೆಗಳು ಮತ್ತು ಅವುಗಳಿಂದುಂಟಾಗುವ ದೈಹಿಕ ಮತ್ತು ಭಾವನಾತ್ಮಕ ಆತಂಕ ಮತ್ತು ಒತ್ತಡಗಳ ಬಗ್ಗೆ ಉದ್ಯೋಗಸ್ಥ ಮಹಿಳೆಯರನೇಕರು ಮಾತಾಡಿದ್ದಾರೆ. ಒಬ್ಬ ಒಳ್ಳೆಯ ಹೆಂಡತಿ ಮತ್ತು ಒಬ್ಬ ದಕ್ಷ ಅಧಿಕಾರಿಯ ಪಾತ್ರಗಳ ಸಮ್ಮಿಶ್ರಣ ಕಷ್ಟಕರ. ಆದರೆ ಒಬ್ಬ ಒಳ್ಳೆಯ ಗಂಡ ಮತ್ತು ಒಬ್ಬ ದಕ್ಷ ಅಧಿಕಾರಿಯ ಪಾತ್ರಗಳ ಸಮ್ಮಿಶ್ರಣವನ್ನು ಪುರುಷರಿಂದ ನಿರೀಕ್ಷಿಸುವಂತಿಲ್ಲ.

ಖಾಸಗಿ ಮತ್ತು ಸಾರ್ವಜನಿಕಗಳೆಂಬ ಈ ಕಟ್ಟುನಿಟ್ಟಿನ ವಿಭಜನೆಯನ್ನು ಸ್ತ್ರೀವಾದಿಗಳು ವಿಮರ್ಶಿಸಿದ್ದಾರಲ್ಲದ ಸವಾಲುಗಳನ್ನೊಡ್ಡಿದ್ದಾರೆ. ಕಾರಣ, ಈ ವಿಭಜನೆಯು ಪುರುಷರ ಮೇಲುಗೈಯನ್ನು ಪ್ರೋತ್ಸಾಹಿಸುವುದರ ಮೂಲಕ ಅಸಮಾನತೆಗಳನ್ನು ಹೆಚ್ಚಿಸುತ್ತದೆನ್ನುಪುದು ಅವರ ನಂಬಿಕೆಯಾಗಿದೆ. ಈ ದ್ವಂದ್ವಕ್ಕೆ ಸವಾಲೆಂಬಂತೆ 'ವೈಯಕ್ತಿಕವಾದುದು ರಾಜಕೀಯವಾದುದು' ಎಂಬ ಘೋಷಣೆಯನ್ನು ಮಹಿಳಾ ಚಳವಳಿ ಹುಟ್ಟುಹಾಕಿತಲ್ಲದೆ ಅದನ್ನು ಜನಪ್ರಿಯಗೊಳಿಸಿತು.

***ಕೌಟುಂಬಿಕ ಹಿಂಸೆಯನ್ನು ಕುರಿತ ಮೌನ ಇನ್ನು ಮುಂದಿಲ್ಲ!***

**ಮಹಿಳೆಯರ ಅಧೀನತೆಯ ಸ್ಥಿತಿಗೆ ಬಳಸುವ ದಮನ, ಶೋಷಣೆಯಂಥ ವಿವಿಧ ಶಬ್ದಗಳ ನಡುವೆ ವ್ಯತ್ಯಾಸವಿದೆಯೆ?**

ಈ ಶಬ್ದಗಳನ್ನು ಸಡಿಲವಾಗಿ ಮತ್ತು ಒಂದಕ್ಕೊಂದು ಪರ್ಯಾಯ ಪದಗಳಾಗಿ ಪದೇ ಪದೇ ಬಳಸುತ್ತೇವೆ. ಆದರೆ ಇವುಗಳ ನಡುವೆ ವ್ಯತ್ಯಾಸಗಳಿವೆ. ಲಿಂಗತ್ವ ಅಧೀನತೆಗಳೆಂಬ ಶಬ್ದಗಳು ಲಿಂಗತ್ವಾಧರಿತ ದಮನ ಅಥವಾ ಅಧೀನತೆ ಇದೆಯೆಂದು ಮಾತ್ರ ಹೇಳುತ್ತವೆನ್ನುವುದನ್ನು ಮೊದಲಿಗೆ ಸ್ಪಷ್ಟಪಡಿಸಬಯಸುತ್ತೇನೆ. ಅವು ಯಾವ ಲಿಂಗ ದಮನ ಅಥವಾ ಅಧೀನತೆಗೊಳಪಟ್ಟಿವೆಯೆಂದು ನಿರ್ದಿಷ್ಟಪಡಿಸುವುದಿಲ್ಲ. ಕಟ್ಟುನಿಟ್ಟಾಗಿ ಅರ್ಥೈಸುವುದಾದರೆ, ಲಿಂಗತ್ವ ದಮನವೆಂದರೆ, ನಿಜವಾಗಿಯೂ ಮಹಿಳೆಯರ ದಮನ ಎಂದರ್ಥವಾಗುವುದಿಲ್ಲ, ಸಾಮಾನ್ಯವಾಗಿ ಮಹಿಳೆಯರು ಅಧೀನರಾಗಿರುವುದರಿಂದ ಅವರಿಗೆ ಲಿಂಗತ್ವ ದಮನ ಮತ್ತು ಲಿಂಗತ್ವ ಅಧೀನತೆ ಎಂಬ ಶಬ್ದಗಳು ಅನ್ವಯಿಸುತ್ತವೆಂದು ಭಾವಿಸಲಾಗುತ್ತದೆ.

**ಶೋಷಣೆ** ಶಬ್ದವನ್ನು ಸಾಮಾನ್ಯವಾಗಿ ಮಾರ್ಕ್ಸ್‌ವಾದದ ಹಿನ್ನೆಲೆಯಲ್ಲಿ ಬಳಸಲಾಗುತ್ತದೆ. ಅಂದರೆ, ಆರ್ಥಿಕ ಶೋಷಣೆ ಅಥವಾ ಉಳಿತಾಯವನ್ನು ಕಸಿದುಕೊಳ್ಳುವುದು ಎಂದರ್ಥ. ಮಹಿಳೆಯರ ಶೋಷಣೆ ಎಂದರೆ ಅವರು ಆರ್ಥಿಕ ಸೇವೆಯನ್ನು ಕಡಿಮೆ ದರ ಅಥವಾ ದರ ರಹಿತವಾಗಿ ನೀಡುವಂತೆ

ಮಾಡುವುದು. ಈ ಸಂಬಂಧದಿಂದ ಶೋಷಕರು ಆರ್ಥಿಕ ಅಥವಾ ಭೌತಿಕ ಪ್ರಯೋಜನಗಳನ್ನು ಪಡೆದುಕೊಳ್ಳುತ್ತಿದ್ದಾರೆ.

ದಮನ (Oppression) ಶಬ್ದವನ್ನು ಸಾಮಾನ್ಯವಾಗಿ ಮಹಿಳೆಯರ ಅಧೀನತೆಯ ಸ್ಥಾನ ಅಥವಾ ಅವರ ಮೇಲೆ ಪುರುಷರ ಪ್ರಭುತ್ವವನ್ನು ಕುರಿತಂತೆ ಬಳಸಲಾಗುತ್ತದೆ. ಸಾಮಾನ್ಯಾರ್ಥದಲ್ಲಿ ಈ ಶಬ್ದ ಒಂದು ಗುಂಪು ಮತ್ತೊಂದು ಗುಂಪನ್ನು ಬಲಿಕೊಟ್ಟು ತಾನು ಲಾಭ ಪಡೆಯುವ, ಚಾರಿತ್ರಿಕವಾಗಿ ಮತ್ತು ರಾಜನೀತಿಕವಾಗಿ ಸಂಸ್ಥೀಕರಣಗೊಂಡಿರುವ ಹಕ್ಕುಗಳ ವ್ಯವಸ್ಥೆಗೆ ಸಂಬಂಧಿಸಿದೆ. ಈ ಶಬ್ದ ಬಲಾತ್ಕಾರದಿಂದ, ವಶಪಡಿಸಿಕೊಳುವುದೆನ್ನುವ ಅರ್ಥ ನೀಡುತ್ತದೆ. 'ವರ್ಗಶೋಷಣೆ', 'ಜಾತಿಶೋಷಣೆ', ಅಥವಾ 'ಜನಾಂಗೀಯ ಶೋಷಣೆ' ಎನ್ನುವಂತೆ ಇದನ್ನು ವ್ಯಕ್ತಿ ಮತ್ತು ಗುಂಪುಗಳ ನಡುವಿನ ಕರಾರುಗಳನ್ನು ಬಣ್ಣಿಸಲು ಬಳಸಲಾಗುತ್ತದೆ.

**ಅಧೀನತೆ** ಎಂದರೆ ಮತ್ತೊಬ್ಬರಿಗಿಂತ ಕೆಳಗಿನ ಸ್ಥಾನದಲ್ಲಿರುವುದು ಅಥವಾ ಇನ್ನೊಬ್ಬರ ನಿಯಂತ್ರಣ ಅಥವಾ ಅಧಿಕಾರಕ್ಕೊಳಪಟ್ಟಿರುವುದು ಎಂದರ್ಥ. "ಮಹಿಳೆಯರ ಅಧೀನತೆ" ಎನ್ನುವ ಶಬ್ದ ಮಹಿಳೆಯರ ಕೆಳಗಿನ ಸ್ಥಾನಕ್ಕೆ, ಸಂಪನ್ಮೂಲಗಳು ಮತ್ತು ನಿರ್ಧಾರದ ಅವಕಾಶಗಳ ಕೊರತೆ ಮುಂತಾದವುಗಳಿಗಲ್ಲದೆ, ಹೆಚ್ಚಿನ ಸಮಾಜಗಳಲ್ಲಿ ಪುರುಷಪ್ರಧಾನ ಆಳ್ವಿಕೆಗೆ ಮಹಿಳೆಯರು ಒಳಗಾಗಿರುವುದಕ್ಕೆ ಸಂಬಂಧಿಸಿದೆ.

**"ದಮನ"** ಶಬ್ದವನ್ನು ಸೂಕ್ತವಾದುದೆಂದು ಸ್ತ್ರೀವಾದಿಗಳೆಲ್ಲರೂ ಭಾವಿಸುವುದಿಲ್ಲ. ಗರ್ಡಾ ಲರ್ನರ್ ಪ್ರಕಾರ, "ಇದು ಪಿತೃ ಆಳ್ವಿಕೆಯನ್ನು ಸಂಪೂರ್ಣವಾಗಿ ವರ್ಣಿಸುವುದಿಲ್ಲ. ಪಿತೃ ಆಳ್ವಿಕೆ ದಮನಕಾರಿ ಅಂಶಗಳನ್ನೊಳಗೊಳ್ಳುವುದರೊಂದಿಗೆ ಪರಸ್ಪರ ಕರ್ತವ್ಯಗಳನ್ನೂ ಒಳಗೊಂಡಿರುತ್ತದೆ. ಇದನ್ನು ದಮನಕಾರಿಯೆಂದು ಪದೇ ಪದೇ ಭಾವಿಸುವುದಿಲ್ಲ......'

"... ದಮನ ಎಂಬ ಪದ ತಪ್ಪು ಅರ್ಥವನ್ನು ಕೊಡುತ್ತದೆ. ಇದು ವ್ಯಕ್ತಿ ಕೇಂದ್ರಿತವಾದುದಾಗಿದೆ. ಅಂದರೆ ಇದು ಅನ್ಯಾಯಕ್ಕೊಳಗಾದ ಚರ್ಚಿತ ಗುಂಪಿನ ಪ್ರಜ್ಞೆಯನ್ನು ಪ್ರತಿನಿಧಿಸುತ್ತದೆ. ಇದು ಅಧಿಕಾರ ಸಂಘರ್ಷವನ್ನು, ಒಂದು ಗುಂಪಿನ ಮೇಲೆ ಮತ್ತೊಂದು ಗುಂಪಿನ ಆಧಿಪತ್ಯದಿಂದ ಉಂಟಾದ ಸೋಲನ್ನು ಸೂಚಿಸುತ್ತದೆ. ಯಾವುದೇ ಗುಂಪಿಗಿಂತಲೂ ಹೆಚ್ಚಾಗಿ ಮಹಿಳೆಯರು ಲಿಂಗವ್ಯವಸ್ಥೆಯನ್ನು ಒಪ್ಪಿಕೊಳ್ಳುವ ಮೂಲಕ ತಮ್ಮದೇ ಅಧೀನತೆಗೆ ಶ್ರಮಿಸಿದ್ದಾರೆ. ತಮ್ಮನ್ನು ಅಧೀನತೆಗೊಳಪಡಿಸುವ ಮೌಲ್ಯಗಳನ್ನು ಎಷ್ಟು ಅಂತರ್ಗತಗೊಳಿಸಿಕೊಂಡಿದ್ದಾರೆಂದರೆ ಅವುಗಳನ್ನೇ ತಮ್ಮ ಮಕ್ಕಳಿಗೆ ಸ್ವತಃ ಹಸ್ತಾಂತರಿಸುತ್ತಾರೆ. ಕೆಲವು ಮಹಿಳೆಯರು ತಮ್ಮ ಬದುಕಿನ ಒಂದು ಅಂಶದಲ್ಲಿ ತಮ್ಮ ತಂದೆ ಅಥವಾ ಗಂಡಂದಿರಿಂದ ದಮನಕ್ಕೊಳಗಾಗಿರುತ್ತಾರೆ. ಆದರೆ ತಮ್ಮ ಕೈಯಲ್ಲೇ ಬೇರೆ ಮಹಿಳೆಯರ ಮತ್ತು ಪುರುಷರ ಮೇಲಿನ ಅಧಿಕಾರ ವಿರುತ್ತದೆ. ಮಹಿಳೆಯರನ್ನು ಒಂದು ಗುಂಪಾಗಿ ಅವರ ಪರಿಸ್ಥಿತಿಯನ್ನು ಸೂಚಿಸಲು 'ದಮನ' ಶಬ್ದವನ್ನು ಬಳಸಿದಾಗ ಇಂಥ ಸಂಕೀರ್ಣತೆಗಳು ಗೋಚರಿಸುವುದಿಲ್ಲ, (ಗರ್ಡಾ ಲರ್ನರ್: ದಿ ಕ್ರಿಯೇಷನ್ ಆಫ್ ಪೇಟ್ರಿಯಾರ್ಕಿ: ೧೯೮೬: ಪು. ೨೩೪).'

'ಮಹಿಳೆಯರ ಅಧೀನತೆ' ಎಂಬ ಪದಬಳಕೆಯಿಂದ ವಿಶೇಷವಾದ ಪ್ರಯೋಜನಗಳಿವೆಯೆಂದು ಲರ್ನರ್ ಭಾವಿಸುತ್ತಾರೆ. "ಅಧೀನತೆ ಎನ್ನುವುದು ಆಧಿಪತ್ಯ ಹೊಂದಿರುವವರ ಬಗ್ಗೆ ಯಾವುದೇ ಕೆಟ್ಟ ಉದ್ದೇಶದ ಅರ್ಥವನ್ನು ಕೊಡುವುದಿಲ್ಲ. ಇದು ಅಧಿಪತಿ ಮತ್ತು ಅಧೀನರ ನಡುವಿನ ಒಂದು ಗುಪ್ತ ಒಪ್ಪಂದದ ಸಾಧ್ಯತೆಗೆ ಅವಕಾಶ ನೀಡುತ್ತದೆ. ಮಹಿಳೆಯರ ಚಾರಿತ್ರಿಕ ಅನುಭವಿಕ ಗುಣಲಕ್ಷಣವಾದ ರಕ್ಷಣೆ ಮತ್ತು ಸ್ಥಾನಮಾನಗಳ ಪರಿಸ್ಥಿತಿಯಿಂದಾಗಿ ಅಧೀನತೆಯ ಸ್ಥಾನದ ವಿನಿಮಯದ ಸಾಧ್ಯತೆಯನ್ನು ಇದು ಒಳಗೊಳ್ಳುತ್ತದೆ. ಈ ಸಂಬಂಧಕ್ಕೆ 'ಪಿತೃಪಾರಂಪರಿಕ ಆಧಿಪತ್ಯ' (Paternalistic domination) ಎಂಬ ಶಬ್ದವನ್ನು ನಾನು ಬಳಸುತ್ತೇನೆ. 'ಅಧೀನತೆ'ಯು 'ಪಿತೃಪರಂಪರಾಧಿಪತ್ಯ'ವಲ್ಲದೆ ಸಂಬಂಧಗಳನ್ನೂ ಒಳಗೊಳ್ಳುತ್ತದೆ. ಇದಕ್ಕೆ 'ದಮನ'ಕ್ಕಿಂತ ಹೆಚ್ಚುವರಿ ಅನುಕೂಲಗಳಿವೆ. ಅದೆಂದರೆ, ಅಧೀನತೆಯ ಕಾರಣಗಳಿಗೆ ಇದು ತಟಸ್ಥವಾಗಿರುತ್ತದೆ. ಐದು ಸಾವಿರ ವರ್ಷಗಳಿಗಿಂತಲೂ ಹೆಚ್ಚು ಕಾಲದ ಮಹಿಳೆ-ಪುರುಷರ ನಡುವಿನ ಲಿಂಗ-ಲಿಂಗತ್ವದ ಸಂಕೀರ್ಣವಾದ ಸಂಬಂಧಗಳಿಗೆ ಪುರುಷರ ಅಧಿಕಾರಲಾಲಸೆಯೆಂಬ ಒಂದೇ ಸರಳ ಕಾರಣವನ್ನು ನೀಡಲು ಸಾಧ್ಯವಿಲ್ಲ. ಆದ್ದರಿಂದ ಪುರುಷರು ಮತ್ತು ಮಹಿಳೆಯರಿಬ್ಬರೂ ಕೂಡಿ ಬೇರೆ ಬೇರೆ ಕಾಲಘಟ್ಟಗಳಲ್ಲಿ, ಬೇರೆ ಬೇರೆ ಸ್ಥಳಗಳಲ್ಲಿ ರಚಿಸಿಕೊಂಡ ಹಲವಾರು ವೈವಿಧ್ಯಮಯವಾದ ಲಿಂಗ/ಲಿಂಗತ್ವದ ಸಂಬಂಧಗಳನ್ನು ವಿವರಿಸಲು ನಮಗೆ ಸಾಧ್ಯವಾಗುವಂತೆ ಮೌಲ್ಯ ಮುಕ್ತ ಶಬ್ದಗಳನ್ನು ಬಳಸುವುದೊಳ್ಳೆಯದು." (ಗರ್ಡಾ ಲರ್ನರ್: ಪು. ೨೩೪-೨೩೫)"

**ವಂಚನೆ** ಶಬ್ದವನ್ನು ಮಹಿಳೆಯರ ಪರಿಸ್ಥಿತಿಯನ್ನು ಹೇಳಲು ಕೆಲವೊಮ್ಮೆ ಬಳಸಲಾಗುತ್ತದೆ. ಆದರೆ ಅದು ಅಷ್ಟು ಸೂಕ್ತವಾದುದಲ್ಲ. ಏಕೆಂದರೆ, ಅದು ಅಧಿಕಾರ ಸಂಬಂಧಗಳ ಅಸ್ತಿತ್ವವನ್ನು ಮುಚ್ಚಿಡುತ್ತದೆ. ವಂಚನೆಯೆಂದರೆ, ವಿಶೇಷ ಹಕ್ಕುಗಳು ಮತ್ತು ವಿಶೇಷಾನುಕೂಲತೆಗಳ ಪರಿವೀಕ್ಷಿತ ಗೈರುಹಾಜರಿ. ಅದು ಯಾವುದನ್ನು ನಿರಾಕರಿಸಲಾಗಿದೆಯೋ ಅದರ ಮೇಲೆ ಗಮನ ಹರಿಸುತ್ತದೆಯೇ ಹೊರತು ಅದನ್ನು ನಿರಾಕರಿಸಿದವರ ಮೇಲಲ್ಲ. ಒಬ್ಬ ವ್ಯಕ್ತಿ ಜನ ಸಮೂಹ, ಸಂಸ್ಥೆ, ಪ್ರಾಕೃತಿಕ ಪರಿಸ್ಥಿತಿ ಮತ್ತು ಅನಾಹುತಗಳು, ಅನಾರೋಗ್ಯ ಮತ್ತಿತರ ಹಲವು ಕಾರಣಗಳಿಂದ ವಂಚನೆ ಉಂಟಾಗುತ್ತದೆ.

ಮಹಿಳೆಯರ ಪರಿಸ್ಥಿತಿ ಸಮಾಜದಿಂದ ಸಮಾಜಕ್ಕೆ, ಕಾಲದಿಂದ ಕಾಲಕ್ಕೆ ಬೇರೆ ಬೇರೆಯಾಗಿರುತ್ತಿತ್ತಾದ ಕಾರಣ, ಯಾರಾದರೂ ತಾವು ವಿವರಿಸುತ್ತಿರುವ ಸಂದರ್ಭಕ್ಕನುಗುಣವಾಗಿ ಬೇರೆ ಬೇರೆ ಶಬ್ದಗಳನ್ನು ಬಳಸಬಹುದಾಗಿದೆ.

## ಲಿಂಗತ್ವ ಮತ್ತು ಅಭಿವೃದ್ಧಿ

**ಅಭಿವೃದ್ಧಿಯ ಚರ್ಚಾಂಶಗಳು ಮತ್ತು ಚರ್ಚೆಗಳಲ್ಲಿ ಲಿಂಗತ್ವ ಅಷ್ಟೊಂದು ಪ್ರಾಮುಖ್ಯವನ್ನು ಪಡೆದುಕೊಂಡಿದ್ದು ಹೇಗೆ?**

ಹತ್ತು-ಹದಿನೈದು ವರ್ಷಗಳಿಂದೀಚೆಗೆ ಲಿಂಗತ್ವ ಮತ್ತು ಅಭಿವೃದ್ಧಿಯನ್ನು ಕುರಿತ ಚರ್ಚೆ ಹೆಚ್ಚು ಹೆಚ್ಚಾಗಿ ನಡೆಯುತ್ತಿದೆ. ಇದನ್ನು ಕುರಿತಂತೆ ಹಲವು ಸಮ್ಮೇಳನಗಳು, ತರಬೇತಿಗಳು ಮತ್ತು ಕಾರ್ಯಾಗಾರಗಳು ನಡೆದಿವೆ. ಇಡೀ ಸಮುದಾಯಗಳ ಬದುಕನ್ನು ಉತ್ತಮಗೊಳಿಸುವ ಉದ್ದೇಶದಿಂದ ಯೋಜಿಸಿದ ಅಭಿವೃದ್ಧಿ ಪ್ರಯತ್ನಗಳು ಮಹಿಳೆಯರಿಗೆ ನೆರವಾಗುತ್ತಲೂ ಇರಲಿಲ್ಲ ಅಥವಾ ಅವರಿಗೆ ತೊಂದರೆಯುಂಟುಮಾಡುತ್ತಲೂ ಇರಲಿಲ್ಲ. ಇದು ಸ್ಪಷ್ಟವಾಗುತ್ತಲೇ ಮಹಿಳೆಯರ ಅಥವಾ ಲಿಂಗತ್ವದ ಕಾಳಜಿಗಳು ಅಭಿವೃದ್ಧಿ ವಿಷಯಗಳ ಮೇಲೆ ತಮ್ಮ ಪ್ರಭಾವವನ್ನು ಬೀರಿವೆ. ಸುಮಾರು ಅರವತ್ತರ ದಶಕದ ಕೊನೆ ಮತ್ತು ಎಪ್ಪತ್ತರ ದಶಕದ ಆದಿಯಲ್ಲಿ ವಿಶ್ವದ ವಿವಿಧೆಡೆ ಮಹಿಳಾ ಸಂಶೋಧಕರು ಅಭಿವೃದ್ಧಿ ಯೋಜನೆಗಳಲ್ಲಿ ಮಹಿಳೆಯರನ್ನು ಕಡೆಗಣಿಸಿರುವುದನ್ನು ಎತ್ತಿತೋರಿಸಲಾರಂಭಿಸಿದರು. ಈ ಪ್ರಕ್ರಿಯೆಯಲ್ಲಿ ಪಾಲ್ಗೊಳ್ಳುವಿಕೆಯ ಕೊರತೆ ಮತ್ತು ಬಡವರನ್ನು ಅಂಚಿಗೆ ತಳಿಬಿಟ್ಟಿರುವಂಥ ವಿಚಾರಗಳನ್ನೇ ಈ ಹಿಂದೆ ಗಮನಿಸಲಾಗಿತ್ತು. ಅಭಿವೃದ್ಧಿ ಕಾರ್ಯಕ್ರಮಗಳು ತನ್ನಿಂತಾನೇ ಸಮುದಾಯಗಳ ಎಲ್ಲಾ ಸದಸ್ಯರಿಗೆ ಉಪಯುಕ್ತವಾಗುತ್ತವೆಂದು ಯೋಜನಕಾರರು ನಂಬಿದ್ದರು. ಆದರೆ ಈ ನಂಬಿಕೆ ಹೆಚ್ಚು ಕಡಿಮೆ ಎಲ್ಲೆಡೆಯೂ ಸುಳ್ಳೆಂದು ಸಾಬೀತಾಯಿತು. ಐವತ್ತರ ದಶಕದಲ್ಲಿ ಆಗತಾನೇ ಸ್ವತಂತ್ರವಾಗಿದ್ದ ದೇಶಗಳು ಯೋಜಿತ ಅಭಿವೃದ್ಧಿಯತ್ತ ಮುಖಮಾಡಿದ್ದವು. ಅವುಗಳಿಗೆ ಪಶ್ಚಿಮ ದೇಶಗಳೇ ಮಾದರಿಯಾಗಿದ್ದವು. ಉದ್ಯಮೀಕರಣ ಮತ್ತು ಆಧುನಿಕ ಬೇಸಾಯಗಳು ಬೆಳವಣಿಗೆ ಮತ್ತು ಅಭಿವೃದ್ಧಿಗಳ ಬಾಗಿಲು ತೆರೆಯುತ್ತವೆಂದೇ ಭಾವಿಸಲಾಗಿತ್ತು. ಉದ್ಯಮಪತಿಗಳು, ಜಮೀನ್ದಾರರು, ಶ್ರೀಮಂತ ರೈತರು ಮತ್ತು ಸಣ್ಣ ಉದ್ಯಮಿಗಳ ಮೇಲೆ ಗಮನವಿರಿಸಲಾಗಿತ್ತು. ಅಭಿವೃದ್ಧಿಯ ಪ್ರಯೋಜನಗಳು ಬಹುಸಂಖ್ಯಾತ ಬಡವರಿಗೆ ಹರಿದು ಬರುತ್ತವಲ್ಲದೆ ಕ್ರಮೇಣ ಇಡೀ ಸಮುದಾಯಗಳು

ಸಂಪದ್ಭರಿತವಾಗುತ್ತವೆಂದು ಅಭಿವೃದ್ಧಿಶೀಲ ರಾಷ್ಟ್ರಗಳ ಸರಕಾರಗಳು ನಂಬಿ "ಬಲಶಾಲಿಗಳ ಮೇಲೆ ಬಾಜಿ ಕಟ್ಟಿದವು". ಅಲ್ಪಾದಾಯವುಳ್ಳ ಬಡವರು ಮತ್ತು ಮಹಿಳೆಯರ ಕಡೆ ಯಾವುದೇ ಗಮನ ಹರಿಸಿರಲಿಲ್ಲ. ಕುಟುಂಬ ಮತ್ತು ಆರ್ಥಿಕತೆಗೆ ಮಹಿಳೆಯರ ಕೊಡುಗೆಯನ್ನು ಗುರುತಿಸಲಿಲ್ಲ ಅಥವಾ ಮೌಲ್ಯೀಕರಿಸಲೂ ಇಲ್ಲ.

ಪ್ರಥಮ ವಿಶ್ವಸಂಸ್ಥೆಗಳ ದಶಕವಾದ ೧೯೬೦-೧೯೭೦ರ ಅವಧಿಯಲ್ಲಿ ಅಭಿವೃದ್ಧಿಯ ಪ್ರಯೋಜನಗಳು ಬಹುಸಂಖ್ಯಾತ ಬಡವರನ್ನು ತಲುಪುತ್ತಿರಲಿಲ್ಲ ವೆನ್ನುವುದು ಸ್ಪಷ್ಟವಾಯಿತು. ಕೆಳಮಟ್ಟದ ನೇಮಕಾತಿ, ಆಹಾರದ ಕೊರತೆ ಹಾಗೂ ಶ್ರೀಮಂತರು-ಬಡವರ ನಡುವೆ ಹೆಚ್ಚಿದ ಅಂತರಗಳಿಗೆ ಸಾಕ್ಷಿಗಳಿದ್ದವು. ಈ ಸತ್ಯಾಂಶಗಳು ಮತ್ತು ಕೆಳಹಂತದಿಂದ ಬಂದ ಒತ್ತಡಗಳ ಪರಿಣಾಮವಾಗಿ ಅಭಿವೃದ್ಧಿಯ ಗುರಿಗಳು, ಮತ್ತವುಗಳನ್ನು ತಲುಪುವ ಸಾಧನಗಳನ್ನು ೧೯೭೦-೮೦ರ ದ್ವಿತೀಯ ಅಭಿವೃದ್ಧಿ ದಶಕದಲ್ಲಿ ಮರುಪರಿಶೀಲಿಸ ಲಾಯಿತು.

ಭಾರತ ಮತ್ತು ಬಾಂಗ್ಲಾದಂಥ ದೇಶಗಳ ಗ್ರಾಮೀಣ ಪ್ರದೇಶಗಳಲ್ಲಿ ದುಡಿಯುತ್ತಿರುವ ಸರಕಾರೇತರ ಸಂಸ್ಥೆಗಳು ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಬಡವರು ಮತ್ತು ಮಹಿಳೆಯರು ಪಾಲ್ಗೊಳ್ಳದಿರುವುದನ್ನು ಎತ್ತಿ ತೋರಿಸಿದವು. ಆಗಲೇ 'ಜನರ ಪಾಲ್ಗೊಳ್ಳುವಿಕೆ', 'ತಳಸ್ತರ ವಿಧಾನ', 'ಬೆಳವಣಿಗೆಯೊಡನೆ ಮರುವಿತರಣೆ' ಮುಂತಾದ ಪರಿಕಲ್ಪನೆಗಳು ಚರ್ಚಿತವಾದವು. ಬಡತನ ನಿರ್ಮೂಲನ ಕಾರ್ಯಕ್ರಮಗಳೊಂದಿಗೆ 'ಮೂಲಭೂತ ಸೌಲಭ್ಯ ವಿಧಾನ'ವನ್ನು ಅಳವಡಿಸಿ ಜಾರಿಗೊಳಿಸಲಾಯಿತು.

ಇದೇ ರೀತಿ ಕುಟುಂಬವೊಂದು ಅಭಿವೃದ್ಧಿ ಕಾರ್ಯಕ್ರಮಗಳಿಂದ ಪ್ರಯೋಜನವನ್ನು ಪಡೆದಾಗಲೂ ಅದರಲ್ಲಿನ ಮಹಿಳೆಯರು ಸಮಾನವಾದ ಪ್ರಯೋಜನವನ್ನು ಪಡೆದಿರುವುದಿಲ್ಲವೆನ್ನುವುದು ತಿಳಿದುಬಂತು. ಮಹಿಳೆಯರ ಹಿತಾಸಕ್ತಿ ಮತ್ತು ಕಾಳಜಿಗಳು ಹಾಗೂ ಏಣಿಶ್ರೇಣಿಯ ಲಿಂಗತ್ವ ಸಂಬಂಧಗಳ ಸಮಾನತೆಯನ್ನು ತರುವ ಗುರಿಗಳನ್ನು ಹೊಂದಿರುವ ಸ್ತ್ರೀವಾದೀ ದೃಷ್ಟಿಕೋನದ ವಿಶ್ವದ ವಿವಿಧ ಭಾಗಗಳಲ್ಲಿ ನಡೆದ ಅಧ್ಯಯನಗಳು, ಲಿಂಗಾಂಧತ್ವದ ಅಭಿವೃದ್ಧಿ ಯೋಜನೆಗಳು ಸಾಮಾನ್ಯವಾಗಿ ಮಹಿಳಾ ದೃಷ್ಟಿಕೋನದ ಅಗತ್ಯ ಮತ್ತು ಆಸಕ್ತಿಗಳನ್ನು ಕಡೆಗಣಿಸಿರುವುದಕ್ಕೆ ಕ್ಷೇತ್ರ ಮಾಹಿತಿ ಮತ್ತು ಸಾಕ್ಷ್ಯಗಳನ್ನು ಒದಗಿಸಿವೆ. ಕಡೆಗಣಿಸುವುದೆನ್ನುವುದರ ಅರ್ಥವೆಂದರೆ, ಈಗಿರುವ ಮಹಿಳೆ-ಪುರುಷರ ನಡುವಿನ ಅಸಮಾನತೆಗಳನ್ನು ತೊಡೆದುಹಾಕಲಿಲ್ಲವಷ್ಟೇ ಅಲ್ಲ; ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಮಹಿಳೆಯರ ದುಡಿಮೆ ಮತ್ತು ಕೊಡುಗೆಯ ಸಾಮರ್ಥ್ಯ ಮತ್ತು ಪಾಲ್ಗೊಳ್ಳುವಿಕೆಯನ್ನು ಕಡೆಗಣಿಸಲಾಗಿತ್ತು ಎನ್ನುವುದು. ಪರಿಣಾಮವಾಗಿ ಮಹಿಳೆಯರು ಮತ್ತಷ್ಟು ಅಂಚಿಗೆ ಸರಿದರು ಮತ್ತು ದುರ್ಬಲರಾದರು.

ಮಹಿಳೆಯರಿಗೆ ಶೈಕ್ಷಣಿಕ ಮತ್ತು ತರಬೇತಿಯ ಅವಕಾಶಗಳು ಇರಲಿಲ್ಲ; ತಂತ್ರಜ್ಞಾನ ಅವರನ್ನು ಕೆಲಸದ ಭಾರ/ಹೊರೆ, ಪಕ್ಷಪಾತದ ಧೋರಣೆ ಮತ್ತು ತಪ್ಪುಕಲ್ಪನೆಗಳಿಂದ ಮುಕ್ತರಾಗಿಸಲಿಲ್ಲವೆನ್ನುವುದು ಸರ್ವವಿದಿತ.

**ಈ ಅಂಶಗಳನ್ನು ವಿವರಿಸುವ ಕೆಲವು ಉದಾಹರಣೆಗಳನ್ನು ಕೊಡಬಲ್ಲಿರಾ?**

ಹೆಚ್ಚುಕಡಿಮೆ ವಿಶ್ವದೆಲ್ಲೆಡೆ ಮಹಿಳೆಯರು ಮತ್ತು ರೈತರು ಆಹಾರದ ಉತ್ಪಾದಕರಾಗಿದ್ದಾರೆ. ಆದರೂ ನಮ್ಮ ಯೋಜಕರು, ನಿರ್ಧರಿಸುವ ಸ್ಥಾನದಲ್ಲಿರುವವರು ಮತ್ತು ಸಂವಹನಕಾರರು ಮಹಿಳೆಯರ ಕೊಡುಗೆಯನ್ನು ಸತತವಾಗಿ ಗುರುತಿಸಿಲ್ಲ. ಪುರುಷ-ಮಹಿಳೆ ಎಂಬ ಭಾಷೆಯೇ ಅವರ ತಾರತಮ್ಯದ ಗ್ರಹಿಕೆಯನ್ನು ತೋರಿಸುತ್ತದೆ. ರೈತರ ಬಗ್ಗೆ ಮಾತಾಡುವಾಗ 'ಪುರುಷರು', 'ಅವನು' ಎಂಬ ಸರ್ವನಾಮಗಳನ್ನು ಎಲ್ಲೂ ತಪ್ಪದಂತೆ ಸದಾ ಬಳಸುತ್ತಾರೆ.

**ಮಹಿಳೆಯರನ್ನು ಕಡೆಗಣಿಸುವ ಅಭಿವೃದ್ಧಿ ಕಾರ್ಯಕ್ರಮಗಳು**

ಮಹಿಳೆಯರಿಗೆ ಸಂಬಂಧಿಸಿದಂತೆ ಇರುವ ಕಣ್ಣುಪಟ್ಟಿಗಳಿಂದಾಗಿ ಕೃಷಿ ಮತ್ತು ಅಭಿವೃದ್ಧಿ ಯೋಜನೆಗಳಲ್ಲಿ ಅವರನ್ನು ಕಡೆಗಣಿಸಲಾಗಿದೆಯಷ್ಟೇ ಅಲ್ಲದೆ ಮತ್ತಷ್ಟು ಬದಿಗೆ ಸರಿಸಲಾಗಿದೆ. ಕೃಷಿ, ತೋಟಗಾರಿಕೆ ಮತ್ತು ಪಶುಸಾಕಣೆಗಳ ಕ್ಷೇತ್ರಗಳಲ್ಲಿ ಮಹಿಳೆಯರ ಕೊಡುಗೆ ಪ್ರಧಾನವಾಗಿದ್ದರೂ ಅವುಗಳಿಗೆ ಸಂಬಂಧಿಸಿದ ತರಬೇತಿ, ಮಾಹಿತಿ ಮತ್ತು ಸಾಲಗಳನ್ನು ಪುರುಷ ರೈತರಿಗೆ ನೀಡಲಾಗುತ್ತದೆ. ವಿಸ್ತರಣಾ ಕಾರ್ಯಕ್ರಮಗಳು ಹೆಚ್ಚುಕಡಿಮೆ ಸಂಪೂರ್ಣವಾಗಿ ಪುರುಷರಿಂದ ಪುರುಷರಿಗಾಗಿ ನಡೆಯುತ್ತಾ ಬಂದಿವೆ. ಇದಕ್ಕೆ ವಿರುದ್ಧವಾಗಿ ಹೊಲಿಗೆ, ಕಸೂತಿ, ಹಪ್ಪಳ, ಉಪ್ಪಿನಕಾಯಿ ಮುಂತಾದವುಗಳ ತಯಾರಿಕೆಯಂಥ ಮಹಿಳೆಯರ ಆದಾಯ ಮೂಲದ ಚಟುವಟಿಕೆಗಳು ಅವರಿಗೆ ಯಾವುದೇ ಆದಾಯ ತರದೆ ಸಾಂಪ್ರದಾಯಿಕವಾಗಿ ಉಳಿದು ಬಂದಿವೆ. ಹೆಣ್ತನದ ಮತ್ತು ಗಂಡ್ತನದವುಗಳ ಬಗ್ಗೆ ಹಲವಾರು ತಪ್ಪುಕಲ್ಪನೆಗಳಿವೆ.

ಕೃಷಿ ಅಭಿವೃದ್ಧಿಯು ನಿರ್ಧಾರದ ಹಂತದಿಂದ ಜಾರಿಗೊಳ್ಳುವವರೆಗೆ ಹೆಚ್ಚುಕಡಿಮೆ ಸಂಪೂರ್ಣವಾಗಿ ಪುರುಷರ ನಿಯಂತ್ರಣದಲ್ಲಿರುತ್ತಾ ಬಂದಿದೆ. ಭಾರತದಲ್ಲಿ ೧೯೮೦ರ ದಶಕದಲ್ಲಿ ವಿಶ್ವಬ್ಯಾಂಕು ಯೋಜಿಸಿ, ಧನ ಸಹಾಯ ನೀಡಿದ್ದ ಕೃಷಿ ವಿಸ್ತರಣೆಯ ಬೃಹತ್ ಪ್ರಮಾಣ ಮತ್ತು ವೆಚ್ಚದ ತರಬೇತಿ ಮತ್ತು ಸಂದರ್ಶನ ಯೋಜನೆಗಳು ಮಹಿಳೆಯರನ್ನು ಸಂಪೂರ್ಣವಾಗಿ ಕಡೆಗಣಿಸಿದವು ಅಥವಾ ಅವರ ಸುತ್ತ ಗಿರಕಿ ಹೊಡೆದವು. ಅದೇ ರೀತಿ ನೇಪಾಳದಲ್ಲಿ ಒಂದು ಬೃಹತ್ತಾದ ಮರು ಅರಣ್ಯೀಕರಣ ಕಾರ್ಯಕ್ರಮಕ್ಕೆ ಮಾಧ್ಯಮದ ಬೆಂಬಲ ಕುರಿತ ವರದಿಯೊಂದು ಮಹಿಳೆಯರನ್ನೆಲ್ಲೂ ಉಲ್ಲೇಖಿಸಲಿಲ್ಲ. ಮರು ಅರಣ್ಯೀಕರಣ, ನೀರು ಪೂರೈಕೆ, ಧಾನ್ಯದಾಸ್ತಾನು ಮತ್ತಿತರ ಚಟುವಟಿಕೆಗಳಲ್ಲಿ ಪ್ರಮುಖವಾಗಿ ತೊಡಗಿದ್ದು ಅವುಗಳ ಬಗ್ಗೆ ತೀವ್ರಕಾಳಜಿಯನ್ನು ಹೊಂದಿದ್ದ ಮಹಿಳೆಯರನ್ನು ಅವುಗಳಲ್ಲಿ ತೊಡಗಿಸಿಕೊಳ್ಳಲೂ ಇಲ್ಲ.

ಇದಲ್ಲದೆ ತಂತ್ರಜ್ಞಾನವನ್ನು ಪುರುಷರಿಗೇ ಹೆಚ್ಚಾಗಿ ಕೊಟ್ಟಿರುವುದರಿಂದಾಗಿ ಅದು ಅವರ ನಿಯಂತ್ರಣದಲ್ಲಿದೆ. ಮಹಿಳೆಯರು ಕಷ್ಟಕರವಾದ, ಪುನರಾವರ್ತನೆ ಯಾಗುವ ಶ್ರಮದ ಕೆಲಸಗಳನ್ನು ಮಾಡುತ್ತಲೇ ಬಂದಿರುವುದನ್ನು ಕಾಣುತ್ತಿದ್ದೇವೆ. ಕೃಷಿಯ ವಾಣಿಜ್ಯೀಕರಣದಿಂದಾಗಿ ಮಹಿಳೆಯರ ದುಡಿಮೆ ಇದ್ದಾಗಲೂ ಹಣ ಮತ್ತು ಕುಟುಂಬದ ಸಂಪನ್ಮೂಲಗಳನ್ನು ಪುರುಷರೇ ನಿಯಂತ್ರಿಸುವುದಕ್ಕೆ ದಾರಿಮಾಡಿಕೊಟ್ಟಿವೆ.

*(ಮುಗಿಯಿತು)*


**1000 ಕಂತುಗಳನ್ನು ಮುಗಿಸಿ ಮುನ್ನುಗ್ಗುತ್ತಿರುವ**

*ಬಿ. ಸುರೇಶ ಅವರ*

ನಾಕುತಂತಿ

ನಿರ್ಮಾಪಕರು :

*ಶೈಲಜಾನಾಗ್, ಎಸ್.ವಿ. ಶಿವಕುಮಾರ್*



# ಆಧುನಿಕ ಮಹಿಳೆಯರ ಸಮಸ್ಯೆಗಳು ಮತ್ತು ಪರಿಹಾರಗಳು

● ರಾಜೇಶ್ವರಿ ಎಚ್.ಎಸ್.

ಆಧುನಿಕ ಮಹಿಳೆಯರು ಎಂದಾಕ್ಷಣ ವಿದ್ಯಾವಂತ, ನಗರದಲ್ಲಿ ವಾಸಿಸುವ ಉದ್ಯೋಗಸ್ಥ ಮಹಿಳೆಯರ ಬದುಕಿನ ಚಿತ್ರಣ ಕಣ್ಣು ಮುಂದೆ ಬರುತ್ತದೆ. ಇಲ್ಲಿ ಆಧುನಿಕತೆ ಎಂದರೇನು ಎಂಬ ಪ್ರಶ್ನೆಗಳು, ಆಧುನಿಕತೆಗೆ ವಿವಿಧ ವ್ಯಾಖ್ಯಾನಗಳನ್ನು ನೀಡಬಹುದು. ಇದು ಮುಖ್ಯವಾಗಿ ಸಾಮಾಜಿಕ ಹಾಗೂ ಆರ್ಥಿಕ ಬದಲಾವಣೆಯನ್ನು ಒಳಗೊಂಡಿರಬೇಕು. ಆಧುನಿಕತೆಯನ್ನು ವಿವರಿಸುವಾಗ ಒಂದು ಸರಳ ಮಾಪನವನ್ನು ಉಪಯೋಗಿಸಬಹುದು. ಇದು ಮಹಿಳೆಯರ ಸ್ಥಾನಮಾನ, ಹಾಗೂ ಸ್ಥಿತಿಗತಿಯನ್ನು ಮೇಲ್ಪದರದಲ್ಲಿ ಅಳೆಯುವ ಒಂದು ಸರಳ ವಿಧಾನ. ಈ ವಿಧಾನದಲ್ಲಿ ಅಳೆಯ ಹೋದರೆ ಎಲ್ಲವೂ ಸುಂದರವಾಗಿ ಕಾಣುತ್ತದೆ. ಮಹಿಳೆಯರು ವಿದ್ಯಾವಂತೆಯರಾಗಿದ್ದಾರೆ. ಉನ್ನತ ವಿದ್ಯಾಭ್ಯಾಸದಲ್ಲಿ ಪುರುಷರಿಗಿಂತ ಮೇಲುಗೈಯನ್ನು ಸಾಧಿಸಿದ್ದಾರೆ. ಅತ್ಯುನ್ನತ ಹುದ್ದೆಯನ್ನು ಸ್ತ್ರೀಯರು ಅಲಂಕರಿಸಿದ್ದಾರೆ. ವಿವಿಧ ಕ್ಷೇತ್ರಗಳಲ್ಲಿ ಪುರುಷರಿಗೆ ಸರಿಸಾಟಿಯಾಗಿ ಕೆಲಸ ನಿಭಾಯಿಸುತ್ತಿದ್ದಾರೆ. ಆಕೆ ಆರ್ಥಿಕವಾಗಿ ಸ್ವತಂತ್ರಳಾಗಿದ್ದಾಳೆ, ಸಬಲಳಾಗಿದ್ದಾಳೆ. ಸ್ವತಂತ್ರವಾಗಿ ತೀರ್ಮಾನಿಸುವ, ನಿರ್ಧಾರ ತೆಗೆದುಕೊಳ್ಳುವ ಸಾಮರ್ಥ್ಯ ಹೊಂದಿದ್ದಾಳೆ. ಸ್ವಾವಲಂಬನೆ ಅವಳಲ್ಲಿ ಸ್ವಾಭಿಮಾನವನ್ನು ಮೂಡಿಸಿದೆ. ಇದು ಒಪ್ಪಿಕೊಳ್ಳಬೇಕಾದ ಅಂಶವೇ. ಇದು ವಾಸ್ತವಾಂಶವನ್ನು ಒಳಗೊಂಡ ಚಿತ್ರಣವೂ ಹೌದು. ಆದರೆ ಇದು ಇಲ್ಲಿಗೇ ನಿಲ್ಲಲಾರದು ಅಥವಾ ನಿಲ್ಲಬಾರದು.

ಇದು ಆಧುನಿಕ ಸಮಾಜದ ಭಾಗವಾದ ಮಹಿಳೆಯರ ಬಾಹ್ಯ ಚಿತ್ರಣ ಮಾತ್ರ. ಮಹಿಳೆಯ ಬದುಕಿನ ಈ ಬಾಹ್ಯ ಅಂಶಗಳೊಂದಿಗೆ ಇನ್ನೂ ಹಲವಾರು ಸಂಕೀರ್ಣ ಸಂಗತಿಗಳು ತಳುಕು ಹಾಕಿಕೊಂಡಿವೆ. ಇವು ಸಮಸ್ಯೆಯನ್ನು ಮತ್ತಷ್ಟು ಸಂಕೀರ್ಣಗೊಳಿಸುತ್ತವೆ. ಸಮಸ್ಯೆಗಳು ಸಂಕೀರ್ಣವಾದಷ್ಟೂ ಪರಿಹಾರಗಳೂ ಸಂಕೀರ್ಣ ಸ್ವರೂಪವನ್ನು ಪಡೆಯುತ್ತವೆ. ಆದುದರಿಂದ ಮಹಿಳಾ ಸಮಸ್ಯೆಯನ್ನು ನೋಡುವ ದೃಷ್ಟಿಕೋನವು ಸಹ ಸೂಕ್ಷ್ಮ ಒಳನೋಟವನ್ನು ಒಳಗೊಂಡಿರಬೇಕಾಗುತ್ತದೆ.

ಇಂದು ಮಹಿಳೆ ಸಂಘಟಿತ ಹಾಗೂ ಅಸಂಘಟಿತ ಕ್ಷೇತ್ರ ಎರಡರಲ್ಲೂ ದುಡಿಯುತ್ತಿದ್ದಾಳೆ. ಆದರೆ ಸಂಘಟಿತ ಕ್ಷೇತ್ರದಲ್ಲಿ ದುಡಿಯುವ ಮಹಿಳೆಯರ ಸಂಖ್ಯೆ ಕೇವಲ ಶೇ.೮ರಷ್ಟು ಮಾತ್ರ ಆದರೂ ಎರಡೂ ಕ್ಷೇತ್ರದಲ್ಲಿ ದುಡಿಯುವ ಮಹಿಳೆಯರು ವಿಭಿನ್ನವಾದ ಸಮಸ್ಯೆಯನ್ನು ಎದುರಿಸುತ್ತಿದ್ದಾರೆ. ಅಸಂಘಟಿತ ಕ್ಷೇತ್ರದಲ್ಲಿ ದುಡಿಯುವ ಮಹಿಳೆಯರು ಕಡಿಮೆ ವೇತನ-ಹೆಚ್ಚು ದುಡಿತ, ಕೆಲಸದ ಅಭದ್ರತೆ, ಶೌಚಾಲಯದ ಕೊರತೆ, ಸಂಬಳ ಕಡಿತ ಮುಂತಾದ ಮೂಲಭೂತ ಸಮಸ್ಯೆಗಳನ್ನು ಎದುರಿಸುವುದರ ಜೊತೆಗೆ ಲೈಂಗಿಕ ಶೋಷಣೆಗೂ ಗುರಿಯಾಗಬೇಕಾಗುತ್ತದೆ. ಸಂಘಟಿತ ಕ್ಷೇತ್ರದ ಮಹಿಳೆಯರಿಗೆ ಭದ್ರತೆಯ ಸಮಸ್ಯೆ ಅಷ್ಟಾಗಿ ಇಲ್ಲದಿದ್ದರೂ ಮೇಲಧಿಕಾರಿಗಳು ನೀಡುವ ಮಾನಸಿಕ ಹಿಂಸೆ, ಕಿರುಕುಳ ಮುಂತಾದುವು ಪ್ರಮುಖವಾದ ಸಮಸ್ಯೆಗಳು.

ಇಂದು ನಗರ ಪ್ರದೇಶಗಳಲ್ಲಿ ಅಸಂಘಟಿತ ಸ್ವರೂಪವನ್ನು ಹೊಂದಿರುವ ಐ.ಟಿ.ಬಿ.ಟಿ. ಕ್ಷೇತ್ರ ಬೃಹದಾಕಾರವಾಗಿ ತಲೆ ಎತ್ತುತ್ತಿದೆ. ಉತ್ತಮ ತಾಂತ್ರಿಕ ಪದವಿಯನ್ನು ಗಳಿಸಿರುವ ಇಂಗ್ಲಿಷ್ ಬಲ್ಲ ಬಹಳಷ್ಟು ಮಹಿಳೆಯರು ದೊಡ್ಡ ದೊಡ್ಡ ಸಾಫ್ಟ್‌ವೇರ್ ಕಂಪನಿಗಳಲ್ಲಿ, ಕಾಲ್‌ಸೆಂಟರ್‌ಗಳಲ್ಲಿ ಸುಲಭವಾಗಿ ಉದ್ಯೋಗವನ್ನು ಪಡೆದು ಉತ್ತಮ ವೇತನವನ್ನು ಪಡೆಯುತ್ತಿದ್ದಾರೆ. ಕಂಪ್ಯೂಟರ್ ಕ್ಷೇತ್ರದಲ್ಲೂ ಸಹ ಮಹಿಳೆಯರು ಯಶಸ್ವಿಯಾಗಿ ಕೆಲಸ ಮಾಡುತ್ತಿದ್ದಾರೆ. ಆದರೆ ಮಹಿಳೆಯರ ಅನುಭವವನ್ನು ಕೇಳಿದರೆ ಬೇರೆಯದೇ ಚಿತ್ರಣ ದೊರೆಯುತ್ತದೆ. ರಾತ್ರಿ ಪಾಳಿಯಲ್ಲಿ ಕೆಲಸ ಮಾಡುವುದು ಅನಿವಾರ್ಯವಾದುದರಿಂದ ಸದಾ ಸುರಕ್ಷತೆಯ ಭಯ ಅವರನ್ನು ಕಾಡುತ್ತದೆ. ಪ್ರತಿಭಾ ಎಂಬ ಉದ್ಯೋಗಿಯ ಪ್ರಕರಣ ಇದಕ್ಕೊಂದು ನಿದರ್ಶನ. ಇತ್ತೀಚೆಗೆ ಪೂನಾದಲ್ಲಿ ಬಿ.ಪಿ.ಓ ನಲ್ಲಿ ಕೆಲಸ ಮಾಡುವ ೨೧ ವರ್ಷದ ಹುಡುಗಿಯನ್ನು ಕಾರು ಚಾಲಕ ಹಾಗೂ ಆತನ ಸ್ನೇಹಿತ ಸೇರಿ ಅತ್ಯಾಚಾರವೆಸಗಿ ಕೊಲೆ ಮಾಡಿದ್ದಾರೆ. ಪ್ರತಿಭಾ ಪ್ರಕರಣದಲ್ಲಿ ಈ ಕ್ಷೇತ್ರದಲ್ಲಿ ದುಡಿಯುವ ಮಹಿಳೆಯರ ಸಮಸ್ಯೆಯನ್ನು ಎತ್ತಿ ಹಿಡಿದು ಸಾರ್ವಜನಿಕ ಚರ್ಚೆಗಳು ಸಾಕಷ್ಟು ನಡೆದವು. ನ್ಯಾಯಾಲಯವು ಸ್ವಯಂ ಸ್ಫೂರ್ತಿಯಿಂದ ಐ.ಟಿ.ಬಿ.ಟಿ. ಕ್ಷೇತ್ರದಲ್ಲಿ ದುಡಿಯುವ ಮಹಿಳೆಯರಿಗೆ ಅಗತ್ಯವಾದ ರಕ್ಷಣೆಯನ್ನು ನೀಡಬೇಕೆಂದು ಸರ್ಕಾರಕ್ಕೆ ಆದೇಶ ಸಹ ನೀಡಿತು. ಕೆಲವು ದಿನ ವಾಹನ ತಪಾಸಣೆ ಚಾಲಕರ ಬಗ್ಗೆ ಮಾಹಿತಿ ಸಂಗ್ರಹಿಸುವುದು, ಅಧಿಕಾರಿಗಳೊಡನೆ ಚರ್ಚೆ ನಡೆದವು. ಹೀಗೆ ನಡೆದ ಚರ್ಚೆಗಳು ಹಲವಾರು ವಾದವಿವಾದಗಳನ್ನು ಸಹ ಹುಟ್ಟುಹಾಕಿದವು. ರಾತ್ರಿ ಪಾಳಿಯಲ್ಲಿ ಮಹಿಳೆಯರು ಕೆಲಸ ಮಾಡುವುದನ್ನು ನಿಷೇಧಿಸಿ ಸರ್ಕಾರ ಆದೇಶ ಹೊರಡಿಸಿತು. ಅನಂತರ ಮಹಿಳಾ ಸಂಘಟನೆಗಳ ಒತ್ತಾಯದಿಂದಾಗಿ ನಿಷೇಧವನ್ನು ವಾಪಸ್ಸು ಪಡೆಯಿತು. ಇಂತಹ ಚರ್ಚೆಗಳು ನಡೆದಾಗಲೆಲ್ಲಾ ಮಹಿಳೆಯರಿಗೆ ರಕ್ಷಣೆ ನೀಡುವುದರ ಬದಲಾಗಿ ಅವರ ಮೇಲೆ ನಿರ್ಬಂಧ ಹೇರುವ ಪ್ರಯತ್ನವನ್ನು ಮಾಡಲಾಗುತ್ತದೆ.

ಕಾಲ್‌ಸೆಂಟರ್‌ನಲ್ಲಿ ಕೆಲಸ ಮಾಡುವ ಮಹಿಳೆಯರು ಉತ್ತಮವಾದ ವೇತನವನ್ನು ಪಡೆಯುತ್ತಿದ್ದರೂ ಗ್ರಾಹಕರಿಂದ ಲೈಂಗಿಕ ಶೋಷಣೆಗೆ ಒಳಗಾಗುತ್ತಾರೆ. ಅಸಭ್ಯ ಸಂಭಾಷಣೆ, ಅಶ್ಲೀಲ ಮಾತುಕತೆಗೆ ಒತ್ತಾಯ, ಅವಾಚ್ಯವಾಗಿ ನಿಂದಿಸುವುದು ವೃತ್ತಿಯ ಭಾಗವೆನ್ನುವಷ್ಟು ಸಹಜವಾಗಿ ನಡೆಯುತ್ತವೆ. ವೃತ್ತಿ ಸಂಬಂಧಿತ ಸಮಸ್ಯೆಗಳು ಮಹಿಳೆಯರ ಆರೋಗ್ಯದ ಮೇಲೆ ನಿರ್ದಿಷ್ಟ ಪರಿಣಾಮವನ್ನು ಬೀರುತ್ತವೆ. ನಿದ್ರಾಹೀನತೆ ಸಾಮಾನ್ಯವಾದ ಸಮಸ್ಯೆ. ನಿರ್ದಿಷ್ಟ ಗುರಿಯನ್ನು ನಿಗದಿತ ಸಮಯದಲ್ಲಿ ಸಾಧಿಸಬೇಕಾದುದರಿಂದ ಸದಾ ಮಾನಸಿಕ ಒತ್ತಡದಲ್ಲಿಯೇ ಬದುಕಬೇಕಾಗುತ್ತದೆ. ಸದಾ ಕಂಪ್ಯೂಟರ್ ಮುಂದೆ ಕುಳಿತಿರುವುದರಿಂದಾಗಿ ಕಣ್ಣಿನ ಸಮಸ್ಯೆ, ಬೆನ್ನುನೋವು ಮುಂತಾದವುಗಳು ಆಕೆಯ ಋತು ಚಕ್ರದ ಮೇಲೆ ಗಂಭೀರವಾದ ಪರಿಣಾಮವನ್ನು ಬೀರುತ್ತವೆ. ೨೫ರಿಂದ ೩೫ ವರ್ಷದೊಳಗೆ ಮಹಿಳೆಯರು ಗಂಭೀರವಾದ ಕಾಯಿಲೆಗೆ ಒಳಗಾಗುತ್ತಿದ್ದಾರೆ.

ಈ ಮಹಿಳೆಯರು ದುಡಿಮೆ ಮತ್ತು ಕುಟುಂಬದ ಜವಾಬ್ದಾರಿಗಳ ನಡುವೆ ಸಮತೋಲ ಸಾಧಿಸಲು ಹೆಣಗಾಡುತ್ತಾರೆ. ಹಗಲು ರಾತ್ರಿಯೆನ್ನದೆ ದುಡಿಯಬೇಕಾದ ಈ ಮಹಿಳೆಯರು ಕುಟುಂಬದಲ್ಲಿಯೂ ತಮ್ಮ ಸಾಂಪ್ರದಾಯಿಕ ಪಾತ್ರವನ್ನು ನಿರ್ವಹಿಸಬೇಕಾಗುತ್ತದೆ. ಗಂಡ ಮತ್ತು ಆತನ ಮನೆಯವರು ಆಕೆಯನ್ನು ಅರ್ಥಮಾಡಿಕೊಂಡು ಆಕೆಗೆ ಸಹಕಾರ ಹಾಗೂ ಬೆಂಬಲವನ್ನು ನೀಡಿದರೆ ಮಾತ್ರ ಆಕೆ ಸಮರ್ಥವಾಗಿ ತನ್ನ ಕೆಲಸವನ್ನು

ರ್ವಹಿಸಲು ಸಾಧ್ಯವಾಗುತ್ತದೆ. ಇಲ್ಲದಿದ್ದರೆ ಎರಡು ಪ್ರಪಂಚಗಳ ನಡುವೆ ಗೊಂದಲ, ತಾಕಲಾಟ, ಘರ್ಷಣೆಗಳು ಉದ್ಭವಿಸಿ ಯಾವುದನ್ನೂ ಸರಿಯಾಗಿ ನಿರ್ವಹಿಸದಂತಹ ಮಾನಸಿಕ ಸ್ಥಿತಿಯನ್ನು ಆಕೆ ತಲುಪುತ್ತಾಳೆ.

ಐ.ಟಿ. ಕ್ಷೇತ್ರದಲ್ಲಿ ಉನ್ನತ ಹುದ್ದೆಯನ್ನು ತಲುಪಿದ ಮಹಿಳೆಯರ ಸಂಖ್ಯೆ ತುಂಬಾ ಕಡಿಮೆ. ಮದುವೆಗೆ ಮೊದಲು ಐದು-ಆರು ವರ್ಷ ದುಡಿದು, ಮದುವೆ, ಮಕ್ಕಳಾದ ನಂತರ ಕೆಲಸ ಬಿಡುವವರ ಸಂಖ್ಯೆ ಹೆಚ್ಚಾಗುತ್ತಿದೆ. ಕೆಲಸದಲ್ಲಿ ಮುಂದುವರಿಯುವುದು ಗಂಡ ಮತ್ತು ಮನೆಯವರು ನೀಡುವ ಸಹಕಾರವನ್ನು ಅವಲಂಬಿಸಿದೆ. ವಸ್ತ್ರ ಸಂಹಿತೆಯ ಸಮಸ್ಯೆಯೂ ಈ ಮಹಿಳೆಯರನ್ನು ಕಾಡುತ್ತಿದೆ. ಪುರುಷರನ್ನು ಆಕರ್ಷಿಸದೇ ಇರುವಂತಹ ಉಡುಗೆಯನ್ನು ತೊಡುವಂತೆ ಒತ್ತಡವನ್ನು ಹೇರಲಾಗುತ್ತಿದೆ. ತಲೆಯಿಂದ ಪಾದದವರೆಗೂ ಮೈ ಮುಚ್ಚುವಂತಹ ಬಟ್ಟೆಯನ್ನು ಹಾಕಿಕೊಂಡಿದ್ದ ಮಹಿಳೆಯರ ಮೇಲೂ ಲೈಂಗಿಕ ಹಲ್ಲೆ, ಶೋಷಣೆ ನಡೆಯುತ್ತಿದೆ. ಪುರುಷರ ಮತ್ತು ಮಹಿಳೆಯರ ನಡುವೆ ಪರಸ್ಪರ ಗೌರವಾನ್ವಿತ ಸಂಬಂಧಗಳು ಬೆಳೆದರೆ ಮಾತ್ರ ಇಂತಹ ಸಮಸ್ಯೆಗಳಿಗೆ ಪರಿಹಾರ ಸಾಧ್ಯ.

ವಿದ್ಯಾವಂತ ಮಹಿಳೆಯರು ಇಂದು ಮಾಡೆಲಿಂಗ್ ಕ್ಷೇತ್ರಕ್ಕೆ ಕಾಲಿಡುತ್ತಿದ್ದಾರೆ. ಮಾಡೆಲಿಂಗ್‌ನಲ್ಲಿ ದೊರೆಯುವ ಜನಪ್ರಿಯತೆ, ಕೈತುಂಬಾ ಹಣ, ಪ್ರತಿಷ್ಠೆ, ಗ್ಲಾಮರ್‌ನಿಂದಾಗಿ ಹೆಚ್ಚು ಹೆಚ್ಚು ಮಹಿಳೆಯರು ಈ ಕ್ಷೇತ್ರದಲ್ಲಿ ದುಡಿಯುತ್ತಿದ್ದಾರೆ. ಒಮ್ಮೆ ಇದರಲ್ಲಿ ಕಾಲಿಟ್ಟ ಮಹಿಳೆಯರು ಇದರ ವಿಷವರ್ತುಲದಲ್ಲಿ ಸಿಕ್ಕಿಹಾಕಿಕೊಳ್ಳುತ್ತಾರೆ. ಮಾದಕ ವಸ್ತು ಹಾಗೂ ಪಾರ್ಟಿ ಸಂಸ್ಕೃತಿಗೆ ಬಲಿಯಾಗುತ್ತಾರೆ. ಈ ಕ್ಷೇತ್ರದಲ್ಲಿ ನೆಲೆಯೂರ ಬೇಕಾದರೆ ಲೈಂಗಿಕ ಶೋಷಣೆ, ಕಿರುಕುಳಕ್ಕೆ ಒಳಗಾಗಲೇ ಬೇಕಾಗುತ್ತಿದೆ ಎನ್ನುವ ಮಾತೂ ಇದೆ ! ಇದಕ್ಕೆ ಸಮ್ಮತಿಸದಿದ್ದರೆ, ಈ ವೃತ್ತಿಯಲ್ಲಿ ಮುಂದೆ ಬರಲು ಸಾಧ್ಯವಿಲ್ಲವೆನ್ನುವಷ್ಟು ಉಸಿರುಗಟ್ಟಿಸುವ ವಾತಾವರಣ ಇಲ್ಲಿದೆ ಎನ್ನಲಾಗುತ್ತಿದೆ. ರೂಪದರ್ಶಿಗಳು ತಮ್ಮ ದೇಹ ಸೌಂದರ್ಯವನ್ನು ಕಾಪಾಡುವ ಉದ್ದೇಶದಿಂದ ಡಯಟ್ ಮಾಡುತ್ತಾರೆ. ಡಯಟ್‌ನಿಂದಾಗಿ ಬಹುಪಾಲು ಮಹಿಳೆಯರು ಗಂಭೀರವಾದ ಕಾಯಿಲೆಗೆ ಗುರಿಯಾಗಿ ಮರಣವನ್ನಪ್ಪಿದ್ದಾರೆ. ಇತ್ತೀಚೆಗೆ ಬೆಳಕಿಗೆ ಬಂದ ಗೀತಾನಾಗಪಾಲ್ ಜೀವನಕಥೆ ಈ ದುರಂತಮಯ ಬದುಕಿಗೆ ಹಿಡಿದ ಕನ್ನಡಿಯಾಗಿದೆ. ಜೆಸ್ಸಿಕಾಲಾಲ್‌ರಂತಹವರು ರಾಜಕೀಯ ವ್ಯಕ್ತಿಗಳ ದುರಹಂಕಾರ ಹಾಗೂ ದುಷ್ಟತನಕ್ಕೆ ಬಲಿಯಾಗುತ್ತಾರೆ.

ಕೆಲಸದ ಸ್ಥಳದಲ್ಲಿ ನಡೆಯುವ ಲೈಂಗಿಕ ದೌರ್ಜನ್ಯದ ವಿರುದ್ಧ ಸಾಕಷ್ಟು ದೂರುಗಳು ಈಗಾಗಲೇ ದಾಖಲಾಗಿವೆ. ಇತ್ತೀಚೆಗೆ ಬೆಂಗಳೂರಿನಲ್ಲಿ ಬ್ಯಾಂಕ್ ಉದ್ಯೋಗಿಯಾದ ಶೈಲಜಾ ಸಹೋದ್ಯೋಗಿಯೊಬ್ಬರು ನೀಡುತ್ತಿದ್ದ ಲೈಂಗಿಕ ಕಿರುಕುಳ ತಡೆಯಲಾರದೆ ಆತ್ಮಹತ್ಯೆಗೆ ಶರಣಾದರು. ಐ.ಎ.ಎಸ್ ನಂತಹ ಉನ್ನತ ಹುದ್ದೆಯಲ್ಲಿರುವ ಮಹಿಳೆಯರು ಸಹ ಇಂತಹ ಹಿಂಸೆಗೆ ಒಳಗಾಗುತ್ತಿರುವುದು ಆಶ್ಚರ್ಯವೇನಲ್ಲ. ಸುಪ್ರೀಂ ಕೋರ್ಟ್‌ವರೆಗೆ ಹೋದ ಗಿಲ್ ಪ್ರಕರಣ ಇದಕ್ಕೊಂದು ಉದಾಹರಣೆ. ಸರ್ಕಾರಿ ಇಲಾಖೆಯಲ್ಲಿನ ಅಧಿಕಾರಿಯೊಬ್ಬರು ಹಲವಾರು ಮಹಿಳೆಯರಿಗೆ ಈ ರೀತಿಯ ತೊಂದರೆ ನೀಡುತ್ತಿದ್ದು, ಈ ಎಲ್ಲಾ ಮಹಿಳೆಯರು ಸಂಘಟಿತರಾಗಿ ಮೇಲಧಿಕಾರಿಗಳಿಗೆ ದೂರು ನೀಡಿದ್ದರು. ಮಹಿಳಾ ಆಯೋಗದಲ್ಲಿ ಸಹ ಬಹಳಷ್ಟು ಮಹಿಳೆಯರು ಕೆಲಸದ ಸ್ಥಳದಲ್ಲಿ ನಡೆಯುವ ಲೈಂಗಿಕ ಶೋಷಣೆಯ ವಿರುದ್ಧ ದೂರು ದಾಖಲಿಸಿದ್ದಾರೆ.

ಮಹಿಳೆಯರ ಮೇಲೆ ನಡೆಯುತ್ತಿರುವ ಇನ್ನೊಂದು ಹಿಂಸೆ, ಆಸಿಡ್ ದಾಳಿ. ಮಹಿಳೆಯರ ಅಸ್ತಿತ್ವವನ್ನೇ ಸಂಪೂರ್ಣವಾಗಿ ನಾಶಮಾಡುವ ಈ ಕ್ರೂರವಾದ ದಾಳಿಯು ಟೌನ್ ಹಾಗೂ ನಗರ ಪ್ರದೇಶದ ಬಹಳಷ್ಟು ಮಹಿಳೆಯರ ಮೇಲೆ ನಡೆಯುತ್ತಿದೆ. ನಗರ ಪ್ರದೇಶಗಳಲ್ಲಿ ವಾಸಿಸುವ ಶಿಕ್ಷಿತ ಅವಿವಾಹಿತ ಮಹಿಳೆಯರು, ವಿಚ್ಛೇದಿತ ಮಹಿಳೆಯರು ಎದುರಿಸುವ ಸಮಸ್ಯೆಗಳು ಹಲವಾರು.

ಆಧುನಿಕ ಮಹಿಳೆಯರ ಮೇಲೆ ನಡೆಯುತ್ತಿರುವ ಹಿಂಸೆ, ದೌರ್ಜನ್ಯ, ಶೋಷಣೆಯ ಸ್ವರೂಪವೂ ಬದಲಾಗುತ್ತಾ ಸಂಕೀರ್ಣ ಸ್ವರೂಪವನ್ನು ಪಡೆಯುತ್ತಿದೆ. ಇವುಗಳೆಲ್ಲದರ ಹಿಂದೆ ಪುರುಷ ಪ್ರಧಾನ ಮೌಲ್ಯ, ಸಂಪ್ರದಾಯ, ಪದ್ಧತಿಗಳು ಬಲವಾಗಿ ಕೆಲಸ ಮಾಡುತ್ತವೆ. ಜೊತೆಗೆ ಈ ಜಾಗತೀಕರಣ, ಖಾಸಗೀಕರಣ ಹಾಗೂ ಕೋಮುವಾದದ ಹಿನ್ನೆಲೆಯಲ್ಲಿ ಹಿಂಸೆಯ ಸ್ವರೂಪವು ಬದಲಾಗುತ್ತಾ ಹೋಗುತ್ತಿದೆ.

ಆಧುನಿಕ ಮಹಿಳೆಯರು ದುಡಿಮೆಯ ಕ್ಷೇತ್ರದಲ್ಲಿ ತಮ್ಮ ಛಾಪನ್ನು ಮೂಡಿಸಿದ್ದರೂ ಸಹ ಕುಟುಂಬದೊಳಗೆ ಅವರ ಸ್ಥಾನಮಾನದಲ್ಲಿ ಮೂಲಭೂತವಾದ ಬದಲಾವಣೆ ಆಗಿದೆಯೆಂದು ಹೇಳಲು ಸಾಧ್ಯವಿಲ್ಲ, ಆಕೆಯ ದುಡಿಮೆ ಆರ್ಥಿಕ ಆದಾಯ ತರುವುದರಿಂದ ಪುರುಷ ಪ್ರಧಾನ ವ್ಯವಸ್ಥೆ ಅದನ್ನು ಸುಲಭವಾಗಿ ಒಪ್ಪಿಕೊಳ್ಳುತ್ತಿದೆ. ಆದರೆ ಕುಟುಂಬದಲ್ಲಿ ಅವಳ ಸ್ಥಾನಮಾನದ ಬದಲಾವಣೆಯು ಮೌಲ್ಯಗಳ ಬದಲಾವಣೆಗೆ ಸಂಬಂಧಪಟ್ಟಿರುವುದರಿಂದ ಅದನ್ನು ಅಷ್ಟು ಸುಲಭವಾಗಿ ಒಪ್ಪಿಕೊಳ್ಳಲಾಗುತ್ತಿಲ್ಲ. ಹಾಗಾಗಿ 'ಮನೆ' ಹಾಗೂ 'ಮನೆಯಾಚೆ'ಗಿನ ಜವಾಬ್ದಾರಿಗಳು ಹೆಚ್ಚಿನ ಹೊರೆಯಾಗಿ ಪರಿಣಮಿಸುತ್ತವೆ. ಪ್ರಥಮದರ್ಜೆ ಕಾಲೇಜಿನ ಉಪನ್ಯಾಸಕಿಯಾದ ಮಹಿಳೆಯೊಬ್ಬರು ಕೈತುಂಬಾ ತರುವ ಆದಾಯ ಆಕೆಯ ಗಂಡನನ್ನು ಸೋಮಾರಿಯನ್ನಾಗಿಸುತ್ತಿದೆ. ಆಕೆಯೇ ಕುಟುಂಬದ ಸಂಪೂರ್ಣ ಹೊರೆಯನ್ನು ಹೊರುತ್ತಾಳೆ. ತನಗೆ ನಿರ್ದಿಷ್ಟವಾದ ಕೆಲಸ ಹಾಗೂ ನಿರ್ದಿಷ್ಟವಾದ ಆದಾಯವಿಲ್ಲದುದರಿಂದ ಆತ ತನ್ನ ಜವಾಬ್ದಾರಿಗಳಿಂದ ತನ್ನನ್ನು ತಾನೆ ಸ್ವಯಂ ಮುಕ್ತಿಗೊಳಿಸಿಕೊಂಡಿದ್ದಾನೆ. ಪ್ರಶ್ನಿಸಿದಲ್ಲಿ ಮನೆಯಲ್ಲಿ ರಾದ್ಧಾಂತವೇ ನಡೆಯುತ್ತದೆ. "ನೀನು ದುಡಿಯುತ್ತೀಯೆಂಬ ದುರಹಂಕಾರ" ಎಂಬ ಮಾತಿನಿಂದ ಹಿಡಿದು ಕೊನೆಗೆ ಎಲ್ಲೆಲ್ಲಿಗೊ ತಲುಪುತ್ತದೆ. ಕೀಳರಿಮೆಯಿಂದ ನರಳುವ ಆತ ಅಮಾನುಷವಾದ ಮಾನಸಿಕ ಹಿಂಸೆಯನ್ನು ನೀಡುತ್ತಾನೆ. ಮಕ್ಕಳ ಮೇಲೆ ಬೀರುವ ಪರಿಣಾಮ, ಕೆಲಸದ ವಾತಾವರಣದಲ್ಲಿನ ಗೌರವ, ಸಮಾಜ ಮುಂತಾದ ಕಾರಣಕ್ಕೆ ಆಕೆ 'ಮೌನ'ವಾಗಿ ತನ್ನ ಮೇಲೆ ನಡೆಯುವ ಮಾನಸಿಕ ಹಲ್ಲೆಯನ್ನು ಸಹಿಸಿಕೊಳ್ಳುತ್ತಾಳೆ.

ಮಹಿಳೆ ಉದ್ಯೋಗದಲ್ಲಿ ಉತ್ತಮ ಹೆಸರು ಗೌರವ ಪಡೆದಿದ್ದರೆ ಸಹೋದ್ಯೋಗಿಗಳ ಜೊತೆಗೆ ಸ್ನೇಹಪರವಾಗಿದ್ದರೆ. ಚಂದವಾಗಿ ಅಲಂಕಾರ ಮಾಡಿಕೊಂಡರೆ, ಸರಿಯಾದ ಸಮಯಕ್ಕೆ ಮನೆಗೆ ಬರದಿದ್ದರೆ ಸಹಿಸದ ಗಂಡಂದಿರು ವಿಕೃತವಾದ ಮಾನಸಿಕ ಹಿಂಸೆಯನ್ನು ನೀಡುತ್ತಾರೆ. ಮಹಿಳೆಯರ ಚಾರಿತ್ರ್ಯವನ್ನು ಅನುಮಾನಿಸುತ್ತಾರೆ. ಇತ್ತೀಚೆಗೆ ವಿಧಿ ವಿಜ್ಞಾನ ಸಂಸ್ಥೆಯ ಒಂದು ವರದಿಯಂತೆ ಪ್ರತಿ ವರ್ಷ ಈ ಸಂಸ್ಥೆಗೆ ಒಂದು ನೂರು ಕೇಸುಗಳು ಬರುತ್ತವೆ. ಇವೆಲ್ಲವೂ ಗಂಡಂದಿರು ತಮ್ಮ ಹೆಂಡತಿಯರ ಚಾರಿತ್ರ್ಯವನ್ನು ತಿಳಿದುಕೊಳ್ಳುವುದಕ್ಕೆ ಸಂಬಂಧಿಸಿದವು. ಬಹುಪಾಲು ಗಂಡಂದಿರು ತಮ್ಮ ಹೆಂಡತಿಯರಿಗೆ ಗೊತ್ತಿಲ್ಲದ ಹಾಗೆ ಮಕ್ಕಳು ತಮ್ಮ ಮಕ್ಕಳು ಹೌದೇ ಅಥವಾ ಇಲ್ಲವೆ ಎಂಬುದನ್ನು ಪರೀಕ್ಷಿಸಲು ಬರುತ್ತಾರೆ. ಈ ಸಂಸ್ಥೆಯ ನಿರ್ದೇಶಕರ ಪ್ರಕಾರ ಇಂತಹ ಪ್ರಕರಣಗಳಲ್ಲಿ ನೂರಕ್ಕೆ ತೊಂಬತ್ತು ಭಾಗ ಅವರ ಅನುಮಾನ ಸುಳ್ಳಾಗಿರುತ್ತದೆ. ಇದಕ್ಕಾಗಿ ಲಕ್ಷಾಂತರ ರೂ ಖರ್ಚು ಮಾಡಲೂ ಹಿಂಜರಿಯದ ಪುರುಷರಿದ್ದಾರೆ.

ಮಧ್ಯಮ ವರ್ಗದ ಮಹಿಳೆಯರು ಕುಟುಂಬದ ಟೊಳ್ಳು ಗೌರವವನ್ನು ಕಾಪಾಡಲು ತಮ್ಮ ಸುತ್ತ ಪೊಳ್ಳು ಗೋಡೆಯನ್ನು ಕಟ್ಟಿಕೊಂಡು ಬದುಕುತ್ತಿದ್ದಾರೆ. ಬ್ಯಾಂಕ್ ಉದ್ಯೋಗಿಯಾದ ಮಹಿಳೆಯೊಬ್ಬರು ತಾನು ತಂದ ವೇತನವನ್ನು

*Edited, Printed, Published and owned by Rajeshwari H.S., No. 114/5, 9th Cross*
*2nd Main, Chamarajpet, Bangalore - 560 018.*
*Printed at ILA Mudrana, No. 36, 40 Ft. Road, Raghavanagara, New Timberyard Layout, Bangalore - 560 026.*
*Published at No. 114/5, 9th Cross, 2nd Main, Chamarajpet, Bangalore - 560 018. Editor : Rajeshwari H.S.*

ತಿಂಗಳ ಮೊದಲಲ್ಲೇ ಗಂಡನ ಕೈಗೊಪ್ಪಿಸಿ ತನಗೆ ಬೇಕಾದ ಬಸ್‌ಚಾರ್ಜನ್ನು ಆತನಿಂದ ಪಡೆಯುತ್ತಾರೆ. ಇನ್ನೊಬ್ಬ ಮಹಿಳಾ ಅಧಿಕಾರಿಯ ಗಂಡ ಮನೆಯ ಬೀರುವಿನ ಬೀಗದಕೈಯನ್ನು ಸದಾ ತನ್ನ ಬಳಿ ಇಟ್ಟುಕೊಂಡಿರುತ್ತಾನೆ. ಹೆಂಡತಿ ಮದುವೆಗೊ ಅಥವಾ ಇನ್ನೆಲ್ಲಿಗೊ ಹೋಗಬೇಕಾದರೆ ಬೀರುವಿನಿಂದ ಆತ ತೆಗೆದುಕೊಟ್ಟ ಸೀರೆಯನ್ನೇ ಉಟ್ಟು ಹೋಗಬೇಕು. ಇಂತಹ ಪರಿಸ್ಥಿತಿಯಲ್ಲಿ ತಾವು ತರುವ ವೇತನವನ್ನು ಎಷ್ಟು ಮಹಿಳೆಯರು ತಾವೇ ನಿರ್ವಹಿಸುತ್ತಾರೆ ಎಂಬುದು ಪ್ರಶ್ನಾರ್ಹ. ಸೈಟು ತೆಗೆದುಕೊಳ್ಳುವ, ಮನೆಕಟ್ಟುವ ಅಥವಾ ಇನ್ನಾವುದೇ ವಿಚಾರದಲ್ಲಿ ನಿರ್ಧಾರ ತೆಗೆದುಕೊಳ್ಳಲು ಪುರುಷರು ಬಿಡುವುದೇ ಇಲ್ಲ. ಇಂತಹ ವಿಚಾರಗಳನ್ನು ಹೆಂಡತಿಯರೊಂದಿಗೆ ವಿವರವಾಗಿ ಚರ್ಚಿಸುವುದೂ ಇಲ್ಲ. ಹಣ ಪಡೆಯುವಾಗ ಆಕೆಗೆ ವಿಷಯ ತಿಳಿಸಬಹುದೇ ವಿನಃ ಸಹಭಾಗಿತ್ವದ ದೃಷ್ಟಿಯಿಂದ ಆಕೆಯೊಂದಿಗೆ ಚರ್ಚಿಸುವುದಿಲ್ಲ. ನನ್ನ ಗೆಳತಿಯೊಬ್ಬಳು ಮನೆಯನ್ನು ಕಟ್ಟುವ, ಮಾರುವ ವಿಚಾರವನ್ನು ಚರ್ಚಿಸಲು ಪ್ರಯತ್ನಿಸಿದಾಗಲೆಲ್ಲಾ ಆತ ನಿನಗೇನು ಗೊತ್ತಾಗುತ್ತದೆಯೆಂದು ಆಕೆಯ ಬಾಯಿ ಮುಚ್ಚಿಸುತ್ತಿದ್ದ. ಕೊನೆಯಲ್ಲಿ ಆಕೆ ತನ್ನ ಅಭಿಪ್ರಾಯವನ್ನು ಹೇಳುವುದನ್ನೇ ಬಿಟ್ಟುಬಿಟ್ಟರು. ಆಕೆಯ ಸ್ವಂತ ಮನೆಯನ್ನು ಮಾರಿ ಬಂದ ಹಣವನ್ನು ಇನ್ನಾವುದೊ ವ್ಯವಹಾರಕ್ಕೆ ಹಾಕಿ ಆತ ನಷ್ಟ ಮಾಡಿದ. ಈ ಮಧ್ಯದಲ್ಲಿ ಆತನಿಗೆ ಅಪಘಾತವಾಗಿ ಅಸಹಾಯಕನಾಗಿ ಮನೆಯಲ್ಲಿಯೇ ಕೂರುವಂತಾಯಿತು. ದಿಢೀರೆಂದು ಹಲವಾರು ಜವಾಬ್ದಾರಿಗಳು ಅವಳ ಮುಂದಿದ್ದವು. ಸಮಸ್ಯೆಗಳು, ಆಸ್ಪತ್ರೆಯ ಖರ್ಚು, ಗಂಡನ ಆರೋಗ್ಯ, ಮಗನ ವಿದ್ಯಾಭ್ಯಾಸ, ವ್ಯವಹಾರದಲ್ಲಾದ ನಷ್ಟ ಇವುಗಳನ್ನು ನಿಭಾಯಿಸುವುದರಲ್ಲಿ ಆಕೆ ತತ್ತರಿಸಿ ಹೋದಳು.

ಹೊರಗೆ ದುಡಿಯುವ ಮಹಿಳೆ ಕುಟುಂಬದ ಜವಾಬ್ದಾರಿಯನ್ನೂ ಹೊರಬೇಕಾಗುತ್ತದೆ. ಮನೆಗೆಲಸದವರ ನೆರವು, ತಾಂತ್ರಿಕ ಸೌಲಭ್ಯಗಳು ದೊರೆತಿದ್ದರೂ, ಒಟ್ಟಾಗಿ ಕುಟುಂಬದ ನಿರ್ವಹಣೆ ಅವಳ ಹೆಗಲ ಮೇಲಿದೆ. ಮನೆಯ ಜವಾಬ್ದಾರಿಯನ್ನು ಪುರುಷರು ಹಂಚಿಕೊಂಡರೆ ಆಕೆ ಕೂಡ ಉಸಿರಾಡಬಹುದು. ಕೆಲಸಕ್ಕೆ ಹೊರಡುವ ಮೊದಲು ಉಸಿರುಗಟ್ಟಿಕೊಂಡು ಕೆಲಸಮಾಡಿ ಹೊರಡುವುದು, ಕಛೇರಿಯಿಂದ ಮನೆಗೆ ಆತಂಕ–ಒತ್ತಡದಿಂದಲೇ ಓಡಿ ಬರುವುದು, ಅಡಿಗೆ ಮಾಡುವುದು, ಮನೆಯನ್ನು ಶುಚಿಗೊಳಿಸುವುದು, ತರಕಾರಿ ತರುವುದು, ಮಕ್ಕಳ ಜವಾಬ್ದಾರಿ, ಅವರ ಅಭ್ಯಾಸ ಇವುಗಳೊಂದಿಗೆ ಕರೆಂಟ್, ಟೆಲಿಫೋನ್ ಬಿಲ್ಲು ಕಟ್ಟುವುದು ಗಾಡಿ ಓಡಿಸಲು ಕಲಿತಿದ್ದರೆ, ಮಕ್ಕಳನ್ನು ಸ್ಕೂಲಿಗೆ ಬಿಡುವುದು, ಕರೆದುಕೊಂಡು ಬರುವುದು ಇನ್ನೂ ಹೀಗೆ ಹಲವಾರು ಕೆಲಸಗಳು ..... ಇಷ್ಟು ಒತ್ತಡ ಬಿದ್ದರೆ, ಅದು ಅವಳ ಮೇಲೆ ಎಷ್ಟರ ಮಟ್ಟಿಗೆ ನಕಾರಾತ್ಮಕ ಪರಿಣಾಮ ಬೀರುತ್ತದೆಯೆಂದರೆ "ಅಯ್ಯೋ ಸುಮ್ಮನೆ ಮನೆ, ಮಕ್ಕಳು, ಮನೆಕೆಲ್ಸಾ ಮಾಡಿಕೊಂಡು ಮನೆಯಲ್ಲಿಯೇ ಇದ್ದಿದ್ರೆ ಎಷ್ಟೊ ನೆಮ್ಮದಿಯಗಿ ಇರಬಹುದಾಗಿತ್ತು" ಎಂದು ಬಹಳಷ್ಟು ಮಹಿಳೆಯರು ಹಳಹಳಿಸುತ್ತಾರೆ. ಮಹಿಳೆಯರು ಪುರುಷರಿಗೆ ಸರಿಸಮಾನವಾಗಿ ಎಲ್ಲಾ ಕೆಲಸಗಳನ್ನು ನಿರ್ವಹಿಸಬಲ್ಲಳು ಎಂಬುದೇ ಅವಳನ್ನು ತುಳಿಯುವ ಮಾರ್ಗವಾಗಿ ಪರಿಣಮಿಸುತ್ತದೆ. ಇದು ಕೇವಲ ಕುಟುಂಬದಲ್ಲಿ ಮಾತ್ರವಲ್ಲ, ಕಛೇರಿಗಳಲ್ಲೂ ಪುರುಷ ಅಧಿಕಾರಿಗಳು ತಾವು ಮಾಡಬೇಕಾದ ಕೆಲಸಗಳನ್ನು ಮೆಲ್ಲಗೆ ಮಹಿಳಾ ಅಧಿಕಾರಿಗಳಿಗೆ ಜಾರಿಸಿ ತಾವು ಕಾಫಿಗೊ, ಸಿಗರೇಟು ಸೇದಲೆಂದೊ, ಸ್ನೇಹಿತರೊಂದಿಗೆ ಮಾತುಕತೆಯಲ್ಲೋ ತೊಡಗಿರುವ ಸನ್ನಿವೇಶಗಳು ಕಂಡುಬರುತ್ತವೆ.

ವಿದ್ಯೆ, ಉದ್ಯೋಗ, ಆರ್ಥಿಕ ಸ್ವಾತಂತ್ರ್ಯ, ಸಮಾನತೆ, ಸ್ವಾವಲಂಬನೆ, ಮುಂತಾದವು ಮಹಿಳೆಯ ಬಿಡುಗಡೆಯ ಮೆಟ್ಟಿಲುಗಳೆಂದು ಭಾವಿಸಲಾಗಿದೆ. ಅವು ಅವಳ ಬಿಡುಗಡೆಯ ಹಾದಿಯೂ ಹೌದು; ಪ್ರಸ್ತುತ ಸನ್ನಿವೇಶದಲ್ಲಿ ಪುರುಷರ ಜವಾಬ್ದಾರಿಗಳ ಬಿಡುಗಡೆಯ ಹಾದಿಗಳಾಗಿ ಮಾರ್ಪಡುತ್ತಿರುವುದೂ ಹೌದು. ಇವು ಯೋಚಿಸಬೇಕಾದ ವಿಷಯಗಳು. ಜೊತೆಗೆ ಸರಕು ಸಂಸ್ಕೃತಿಯು, ಜಾಗತೀಕರಣ, ಕೋಮುವಾದದ ಹಿನ್ನೆಲೆಯಲ್ಲಿ ಮಹಿಳೆಯರ ಬಿಡುಗಡೆಯ ಹಾದಿಯನ್ನು ಸುಲಭವಾಗಿ ಕೋಆಪ್ಟ್ ಮಾಡಿಕೊಳ್ಳುತ್ತಿವೆ!

ಈ ಎಚ್ಚರಿಕೆ, ಜಾಗೃತಿಯು ಮಹಿಳೆಯರ ಸಮಸ್ಯೆಯ ಪರಿಹಾರಕ್ಕೆ ವೈಯಕ್ತಿಕ ನೆಲೆಯಲ್ಲಿ ಹಾಗೂ ಸಂಘಟಾನಾತ್ಮಕ ಹೋರಾಟದಿಂದ ಪರಿಹಾರಗಳನ್ನು ಹುಡುಕಬಹುದು.

*(೬ನೇ ಅಖಿಲ ಕರ್ನಾಟಕ ಲೇಖಕಿಯರ ಸಮ್ಮೇಳನದ ಸ್ಮರಣ ಸಂಚಿಕೆಗೆ ಬರೆದ ಲೇಖನ)*


Statement about ownership and other particular about News Paper

***"Namma Manasa"***

**Form IV (See Rule 8)**

As required to be published under section 19 of the press and Registration Book act read with the Rule 10 of the Press and Registration of News Papers(Central) 1956.

| | | | |
|---|---|---|---|
| 1) | Place of the Publication | : | Bangalore, Karnataka |
| 2) | Printer's Name & Nationality | : | Rajeshwari H.S, Indian |
| | Address | : | 14/5, 9th Cross, 2nd Main, Chamarajpet, Bangalore-18 |
| 3) | Publisher's Name & Nationality | : | Rajeshwari H.S., Indian |
| | Address | : | 114/5, 9th Cross, 2nd Main, Chamarajpet, Bangalore-18 |
| 4) | Editor's Name & Nationality | : | Rajeshwari H.S., Indian |
| | Address | : | 114/5, 9th Cross, 2nd Main, Chamarajpet, Bangalore-18 |
| 5) | Name and Address of the individual who own's The News Paper | : | Rajeshwari H.S 114/5, 9th Cross, 2nd Main, Chamrajapet, Bangalore-18 |
| 6) | Printed at | : | IIA Mudrana, No. 36, 40 Ft. Road, Raghavanagar, New Timberyard Layout, Bangalore-26, Karnataka. |

I, H.S. Rajeshwari declare that the particulars given above are true to the best of my knowledge and belief.

Sd/-

**H.S. Rajeshwari**

Publisher

Registered with Registrar of Newspapers of India under No. KARKAN/2007/22289
'NAMMA MANASA', REGD. No. : MAG(3) NPP/399(A) / 2006-07 KA/BGS/2074/2007-09

# ನಮ್ಮ ಮಾನಸ

- ಮಹಿಳೆಯರಿಗೆ ಸಂಬಂಧಿಸಿದ ಲೇಖನಗಳು, ವರದಿಗಳು ವಿಶ್ಲೇಷಣೆಗಳು, ವಿಮರ್ಶೆಗಳು, ಅನುಭವಗಳು, ಕತೆ-ಕವನಗಳನ್ನು ನಮ್ಮ ಪತ್ರಿಕೆಯಲ್ಲಿ ಪ್ರಕಟಿಸಲಾಗಿದೆ.
- ಪತ್ರಿಕೆಯು ವಿಷಯಾಧರಿತವಾಗಿದ್ದು, ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಮಹಿಳೆಯರ ಬದುಕಿನ ಮೇಲೆ ಪರಿಣಾಮ ಬೀರುವ ಸಾಮಾಜಿಕ, ರಾಜಕೀಯ, ಆರ್ಥಿಕ ವಿಚಾರಗಳನ್ನು ಚರ್ಚಿಸಲಾಗಿದೆ.
- ವಿವಾಹ, ಕುಟುಂಬದಂತಹ ಸಾಮಾಜಿಕ ಸಂಸ್ಥೆಗಳು, ಮನೆಗೆಲಸ, ಸಂಬಳರಹಿತ ದುಡಿಮೆ, ಆರ್ಥಿಕ ನೀತಿ, ಜಾತಿ, ವರ್ಗ, ಸೌಂದರ್ಯ, ಲಿಂಗ, ಹೆಣ್ತನ ಮುಂತಾದ ವಿಷಯಗಳನ್ನು ಚರ್ಚೆಗೊಳಪಡಿಸಿ ಪ್ರಕಟಿಸಲಾಗಿದೆ. ಗುತ್ತಿಗೆ ಪೌರಕಾರ್ಮಿಕರ ಹೋರಾಟಗಳಿಗೆ ಸ್ಪಂದಿಸಿ ಲೇಖನಗಳನ್ನು ಪ್ರಕಟಿಸಿದೆ.
- ಆರೋಗ್ಯ, ಲೈಂಗಿಕತೆ, ಅಪಾಯಕಾರೀ ಗರ್ಭ ನಿರೋಧಕಗಳು, ಆರ್ಥಿಕತೆ ಮತ್ತು ಅಭಿವೃದ್ಧಿ, ಅಭಿವೃದ್ಧಿ ಯೋಜನೆಗಳು ಮುಂತಾದ ವಿಚಾರಗಳನ್ನು ವಿಮರ್ಶೆಗೊಳಪಡಿಸಲಾಗಿದೆ.
- ಅಣ್ವಸ್ತ್ರೀಕರಣ, ಮಿಲಿಟರೀಕರಣ, ಜಾಗತೀಕರಣದಂಥ ಬೆಳವಣಿಗೆಗಳನ್ನು ಮಹಿಳಾ ದೃಷ್ಟಿಕೋನದಿಂದ ಪ್ರಶ್ನಿಸಲಾಗಿದೆ.
- ಪ್ರಜಾಸತ್ತಾತ್ಮಕವಾದ ಸಂಘಟನೆಗಳೊಡನೆ ಕೋಮುವಾದ, ಸಮಾನ ನಾಗರಿಕ ಸಂಹಿತೆ, ಮೀಸಲಾತಿ, ಲೈಂಗಿಕತೆ, ಪರಿಸರ, ಸ್ಥಳಾಂತರ ಮುಂತಾದ ವಿವಾದಗಳನ್ನು ಕುರಿತ ಚರ್ಚೆಗಳಲ್ಲಿ, ಆಂದೋಲನಗಳಲ್ಲಿ ಪಾಲ್ಗೊಳ್ಳಲಾಗಿದೆ.
- ಸ್ವಸಹಾಯ ಸಂಘಗಳನ್ನು ರಚಿಸುವ ಮೂಲಕ ಮಹಿಳೆಯರ ಸಬಲತೆಗೆ ಪ್ರೋತ್ಸಾಹ ನೀಡಲಾಗಿದೆ.
- ನಮ್ಮದೇ ಮಿತಿಯಲ್ಲಿ ತೊಂದರೆಗೊಳಗಾದ ಮಹಿಳೆಯರಿಗೆ ಸಲಹೆ, ನೈತಿಕ ಬೆಂಬಲಗಳಲ್ಲದೆ ಕಾನೂನಿನ ನೆರವನ್ನು ನೀಡುತ್ತಿದ್ದೇವೆ.
- ಮಹಿಳೆಯರು ತಾವಿದ್ದೆಡೆಯಲ್ಲಿ ಮಹಿಳಾ ಪತ್ರಿಕೆಗಳನ್ನು ಹೊರತರಲು ಪ್ರಯತ್ನಿಸಿದಲ್ಲಿ, ಗುಂಪುಗಳನ್ನು ರಚಿಸಬೇಕಾದಲ್ಲಿ ಸಹಕರಿಸಲು ಉದ್ದೇಶಿಸಿದ್ದೇವೆ.

Registered Magazine



*Posted on 9th of every month at Chamarajpet Post Office*

63. Vanaja V.
No 2329, 12th Main Road
2nd Stage, Vijayanagara
Mysore 570 017.

ವಿಳಾಸ :
ನಮ್ಮ ಮಾನಸ
114/5, 9ನೇ ತಿರುವು, 2ನೇ ಮುಖ್ಯರಸ್ತೆ, ಚಾಮರಾಜಪೇಟೆ
ಬೆಂಗಳೂರು - 560 018